ಶ್ರೀ

ಶ್ರೀಹಯಗ್ರೀವಾಯನಮಃ.

# ಖಚರದರ್ಪಣಾಗ್ರಂಥಃ.

## ಮಧ್ಯಾಧ್ಯಾಯಪ್ರಾರಂಭಃ.

ಓಂ ॥ ಜ್ಞಾನಾನಂದ ಮಯಂದೇವಂ ನಿರ್ಮಲಸ್ಫಟಿಕಾಕೃತಿಂ ।
ಆಧಾರಂ ಸರ್ವವಿದ್ಯಾನಾಂ ಹಯಗ್ರೀವ ಮುಪಾಸ್ಮಹೆ ॥
ಯಸ್ಯಾಸ್ಮರಣಮಾತ್ರೇಣ ವಾಗ್ವಿಭೂತಿರ್ವಿಜೃಂಭತೇ ।
ಸಾಭಾರತೀಸದಾನಿತ್ಯಂ ರಮತಾಂ ಮನ್ಮುಖಾಂಬುಜೇ ॥
ಆನಂದಂಬ್ರಹ್ಮಚಿದ್ರೂಪಂ ಪುರುಷಾರ್ಥ ಫಲಪ್ರದಂ ।
ವಂದೇಲಕ್ಷ್ಮೀನಾರಸಿಂಹಂ ಸತ್ಯಜ್ಞಾನ ಸ್ವರೂಪಿಣಂ ॥

ಶ್ರೀಕೊಳ್ಳೇಗಾಲ ಸಿದ್ಧಾಂತಿ ಕೃಷ್ಣಮಾತ್ಯಮನೀಷಿಣಾ ಕರ್ನಾಟ ಟೀಕಾ ಖಚರದರ್ಪಣಸ್ಯ ಸಮೀರಿತಾ.

ಅ ವ ತ ರ ಣಿ ಕಾ.

ಶ್ರೀಮಚ್ಛಂಕರ ಭಗವತ್ಪಾದಾಚಾರ್ಯರವರು ಸರ್ವಸಿದ್ಧಾಂತ ಸಮ್ಮತವಾಗಿ ಖಚರದರ್ಪಣವೆಂಬ ಗ್ರಂಥವನ್ನು ರಚಿಸಬೇಕೆಂದು ಪ್ರಯತ್ನಿಸಿ ವಿಘ್ನವಿಲ್ಲದೆ ಸಮಾಪ್ತವಾಗುವದಕ್ಕೆ ಸಮಸ್ತದೇವತಾ ಸ್ವರೂಪನಾದ ಪರಬ್ರಹ್ಮನನ್ನು ಸ್ತೋತ್ರಮಾಡುತ್ತಾರೆ.

ಮೂ ॥ ಓಂನಮಃಕಾಲಕರ್ಮಾದಿ ಲೋಕಾದಿಷ್ಟಾನವಸ್ತುನೆ ।
ಸಚ್ಚಿದಾನಂದರೂಪಾಯ ಬ್ರಹ್ಮಣೆಶಾಸ್ತ್ರಯೊನಯೆ॥ ೧ ॥

ಟೀ ॥ ಕಾಲಾದಿಸ್ಥಿತಿಗೆ ಕಾರಣನಾದ ಮತ್ತು ಪರಮಾನಂದ ಸ್ವರೂಪನಾದ ಶಾಸ್ತ್ರಗಳಿಗೆಲ್ಲ ಉತ್ಪತ್ತಿಕಾರಣನಾದ ಪರಬ್ರಹ್ಮನಿಗೆ ನಮಸ್ಕಾರವು.

ಅವ ॥ ಶಿಷ್ಯಶಿಕ್ಷಾರ್ಥವಾಗಿ ಗಣಪತಿಸ್ತವನ್ನು ಹೇಳುತ್ತಾರೆ.

ಮೂ ॥ ಶ್ರೀಸರ್ವಮಂಗಳಾತ್ಮಜ ಮಜಹರಿಹರಮರುದ್ಗಣೈರ್ವಂದ್ಯಂ ।
ವಂದೇಹಮಂತರಾಯದ್ವಾಂತಾರ್ಕಂಶ್ರೀಗಣಾಧಿಪಂನಿತ್ಯಂ ॥ ೨ ॥

ಟೀ ॥ ಪಾರ್ವತೀಪುತ್ರನಾಗಿಯು ಬ್ರಹ್ಮ ವಿಷ್ಣು ಮಹೇಶ್ವರರೇ ಮೊದಲಾದ ದೇವತೆಗಳಿಂದ ಸೇವಿಸಲ್ಪಡುವದಕ್ಕೆ ಯೋಗ್ಯನಾಗಿಯು ಮತ್ತು ವಿಘ್ನವೆಂಬ ಕತ್ತಲೆಗೆ ಸೂರ್ಯನೋಪಾದಿಯಲ್ಲಿರುವ ವಿನಾಯಕನನ್ನು ನಮಸ್ಕರಿಸುತ್ತೇನೆ.

ಅವ|| ಅಂಬಿಕಾಸ್ತವ.

ಮೂ||ಸ್ಮರಹರವಾಮಾಂಗಸ್ಥಾಂಸ್ಮರಜನಕಪ್ರಮುಖದೇವತಾಭಿನುತಾಂ ।
ನಿತರಾಂಸ್ಮರಾಮಿಸತತಂ ಸಕಲಜಗನ್ಮಾತರಂನತಾರ್ತಿಹರಾಂ ॥ ೩ ॥

ಟೀ || ಈಶ್ವರನ ವಾಮಭಾಗದಲ್ಲಿರುವ ಮತ್ತು ಪ್ರದ್ಯುಮ್ನೋತ್ಪಾದಕನಾದ ವಿಷ್ಣುವೇ ಮೊದಲಾದ ದೇವತೆಗಳಿಂದ ಸ್ತೋತ್ರಮಾಡಲ್ಪಟ್ಟಿರುವ ಸಮಸ್ತಲೋಕಕ್ಕೂ ತಾಯಿಯಾದ ಮತ್ತು ಶರಣಾಗತರಾದಂತಾವರ ಕಷ್ಟವನ್ನು ನಾಶಮಾಡುವ ಪಾರ್ವತೀಯನ್ನು ಅತ್ಯಂತವಾಗಿ ಸ್ಮರಿಸುತ್ತೇನೆ.

ಅವ || ಶಾಸ್ತ್ರಮುಖ್ಯರವ್ಯಾದಿಸ್ತವ.

ಮೂ || ರವಿಶಶಿಭೂಸುತಸೌಮ್ಯಾಮರ ಗುರುಕವಿರವಿತನೂತ್ಥ
ರಾಹುಮುಖಾನ್ । ಖಚರಾನಷ್ಟದಿಗೀಶಾನಿಂದ್ರಹುತಾ
ಶನ ಯಮಾದಿಕಾನ್ವಂದೇ ॥ ೪ ॥

ಟೀ || ಸೂರ್ಯ, ಚಂದ್ರ, ಅಂಗಾರಕ, ಬುಧ, ಗುರು, ಶುಕ್ರ, ಶನಿ, ರಾಹು, ಕೇತು, ಮುಂತಾದವರನ್ನು ಮತ್ತು ಅಂತರಿಕ್ಷಚಾರಿಗಳನ್ನೂ ಇಂದ್ರಾಗ್ನಿಯಮನೈರುತ್ಯವರುಣವಾಯು ಕುಬೇರ ಈಶಾನರೆಂಬ ಅಷ್ಟದಿಕ್ಪಾಲಕರೆ ಮುಂತಾದವರನ್ನು ನಮಸ್ಕರಿಸುತ್ತೇನೆ.

ಅವ || ಮಾಡುವಗ್ರಂಥವನ್ನು ಉದ್ದೇಶಿಸುತ್ತಾರೆ.

ಮೂ || ವೇದಾಂಗಮಲ್ಪಬುದ್ಧೀನಾಂ ದುರೂಹಂಫಲವದ್ಯತಃ ।
ಕಾಲದೇಶಾನುಸಾರೇಣ ಪ್ರಕೃತೋಚಿತಮುಚ್ಯತೇ ॥೫॥

ಟೀ || ಜ್ಯೋತಿಶಾಸ್ತ್ರವು ವೇದಕ್ಕೆ ನೇತ್ರಾಂಗವನ್ನಾಗಿ ಹೇಳಿರುವದರಿಂದ ಫಲವತ್ತಾದ ವೇದಾಂಗಶಾಸ್ತ್ರವು ಅಲ್ಪಬುದ್ಧಿಗಳಾದ ಜನರಿಗೆ ಊಹಿಸುವದಕ್ಕೆ ಕೂಡ ಅಸಾಧ್ಯವಾಗಿಧೆಯೋ ಆದ್ದರಿಂದ ಕಾಲದೇಶಾನುಸಾರವಾಗಿ ಪ್ರಕೃತೋಚಿತವಾದ ವಿಷಯವು ಹೇಳಲ್ಪಡುತ್ತದೆ ಎಂಬದಾಗಿ ಪ್ರತಿಜ್ಞೆಮಾಡುತ್ತಾರೆ.

ಅವ || ತಾವುಮಾಡಿರ ತತ್ಕಗ್ರಂಥದಹೆಸರನ್ನು ಹೇಳುತ್ತಾರೆ.

ಮೂ || ಶ್ರುತಿಸ್ಮೃತಿ ಪುರಾಣಾದಿ ಜ್ಯೋತಿಸ್ಸಿದ್ಧಾನ್ತಸಂಹಿತಾಃ ।
ನಿಷ್ಕೃಷ್ಯಬಾಲಬೋಧಾಯವಕ್ಷ್ಯೇಖಚರದರ್ಪಣಂ ॥ ೬ ॥

ಟೀ || ವೇದಮತ್ತು ನಾರದೀಯಾದ್ಯಷ್ಟಾದಶಸ್ಮೃತಿ, ಅಷ್ಟಾದಶಪುರಾಣ, ಸೂರ್ಯಸೋಮ ಬ್ರಹ್ಮವಾಸಿಷ್ಟ ಸಿದ್ಧಾನ್ತಾದ್ಯಷ್ಟಸಿದ್ಧಾನ್ತ,ಮತ್ತು ಭಾರ್ಗವ, ವಾಸಿಷ್ಟ, ಗರ್ಗಸಂಹಿತಾದಿಗಳನ್ನು ಸಹ ನಿಷ್ಕರ್ಷೆಮಾಡಿ ಬಾಲಕರಿಗೆ ವಿಶೇಷವಾಗಿ ಶಾಸ್ತ್ರಜ್ಞಾನ ಉಂಟಾಗುವದಕ್ಕೋಸ್ಕರ ಖಚರದರ್ಪಣ (ಅಂದರೆ ನಕ್ಷತ್ರಗ್ರಹಗೋಳಗಳ ಪ್ರತಿಬಿಂಬವನ್ನು ವ್ಯಕ್ತಪಡಿಸುವಂಥಾ ಕನ್ನಡಿ) ಎಂಬ ಗ್ರಂಥವನ್ನು ಹೇಳುತ್ತೇನೆ.

ಅವ | ಮಧ್ಯರವಿಮೇಷ ಪ್ರವೇಶವಾರಘಳಿಗೆ ಸಾಧನೋಪಾಯ ಹೇಳಲ್ಪಡುತ್ತೆ.

ಮೂ || ಕಲ್ಯಾದ್ಯಬ್ದಗಣೋಥಸಪ್ತಗಗನಾಕ್ಷಿಘ್ನಃ ಖಖೇಭೈರ್ಹೃತಸ್ತಲ್ಲ
ಬ್ಧೈನದಿನಾದಿಕೇನಸಹಿತೋ ಸ್ವಾಂಸಪ್ತತಷ್ಟಾದ್ಭವೇತ್ ।
ಶಿಷ್ಟೋಭಾರ್ಗವವಾಸರಾದಿದಿನಕೃನ್ಮೇಷಪ್ರವೇಶಧ್ರುವೋಜ್ಞೇಯೋ
ಮಧ್ಯಇತೀತರಗ್ರಹಗಣಾನಾಮನ್ಯಥಾಸಾಧ್ಯತೇ || ೭ ||

ಟೀ || ಕಲಿಗತ ಸಂವತ್ಸರವನ್ನು ೨ ಪ್ರತಿಯಾಗಿ ಬರದು ೧ ಪ್ರತಿಯನ್ನ ೨೦೭ ರಿಂದಾಗುಣಿಶಿ ೮೦೦ ರಿಂದಾ ಭಾಗಿಶಿಬಂದ ಲಬ್ಧವನ್ನು ಮತ್ತೊಂದು ಪ್ರತಿಯಾದ ಕಲ್ಯಬ್ದಕ್ಕೆಕೂಡಲು ದಿನವಾಗುವದು ಶೇಷವನ್ನು ೬೦ ರಿಂದ ಗುಣಿಶಿ ೮೦೦ ರಿಂದಾ ಭಾಗಿಸಲು ಮೇಷಸಂಕ್ರಮಣ ಘಳಗೆಯಾಗುವದು ಪುನಹಾ ಶೇಷದಿಂದ ವಿಘಳಿಗೆಯನ್ನು ಸಾಧಿಸಬೇಕು. ದಿನಸಮೂಹಗಳನ್ನು ೭ ರಿಂದ ಭಾಗಿಶಿದ ಶೇಷವೇ ಶುಕ್ರವಾರಾದಿಯಾಗಿ ವರ್ತಮಾನವಾರವನ್ನು ತಿಳಿಸುವದು.

ಉದಾಹರಣಂ.



ಕಲಿಗತ ೪೯೭೫ ನೇ ವರ್ತಮಾನ ಭಾವ ಸಂವತ್ಸರಮಧ್ಯ ರವಿಮೇಷ ಸಂಕ್ರಮಣಕಾಲಕ್ಕೆ ಗ್ರಹಗಳಿಗೆ ಧ್ರುವಕನಿರ್ಣಯೋರ್ಥವಾಗಿ ಗತಕಲ್ಯಬ್ದವನ್ನು ೨ ಪ್ರತಿಇಟ್ಟು ೧ ಪ್ರತಿಯನ್ನ ೨೦೭ ರಿಂದ ಗುಣಿಶಿದ್ದು ೧೦೨೯೮೨೫ ರನ್ನ ೮೦೦ ರಿಂದ ಭಾಗಿಶಿದಲಬ್ಧವು ೧೨೮೭-೧೬-೫೨ ಕಲಿಗತ ಸಂವತ್ಸರದಲ್ಲಿ ಕೂಡಲು ೬೨೬೨-೧೬-೫೨ ಈ ದಿನಸಮೂಹವನ್ನು ೭ ರಿಂದಭಾಗಿಶಿದಶೇಷ ೪-೧೬-೫೨ ಶುಕ್ರವಾರಾದಿಯಾಗಿ ೪ನೇ ವಾರವಾದ ಸೋಮವಾರ ಅರ್ಧರಾತ್ರಾನಂತರ ೧೬-೫೨ ಘಳಿಗೆಯಲ್ಲಿ ಮೇಷಸಂಕ್ರಮಣ ಪ್ರವೇಶಕಾಲವೆಂದು ತಿಳಿಯತಕ್ಕದ್ದು.

ಅವ || ಚಂದ್ರಾದಿಗಳಿಗೆ ವರ್ಷಾಂತಧ್ರುವವನ್ನು ಹೇಳಲ್ಪಡುತ್ತೆ.

ಮೂ || ಅರ್ಕಾನ್ಯಧ್ರುವನಿರ್ಣಯೆತುಗುಣಕಾನ್ವಕ್ಷ್ಯೆ ಕ್ರಮಾದ್ದಾರಕಾಕಲ್ಯಾ
ದ್ಯಬ್ದಗಣಷ್ಷಡಕ್ಷನಿಗಮಾಪ್ನಾಯೋಹತಸ್ಸಂಹೃತಃ।ಶೂನ್ಯಾಭ್ರಾಭ್ರ
ಕರೇಂದುಭಿಸ್ತುಭಗಣಾದ್ಯಶ್ಚಂದ್ರವರ್ಷ ಧ್ರುವಸ್ಯಾದ್ಭೌಮಸ್ಯನಿಧೀಂ
ದುರಾಮನಿಹತಶ್ಶೂನ್ಯಾಭ್ರತರ್ಕೈರ್ಹೃತಃ||೮||ಬುಧಸ್ಯತರ್ಕವೇದೇಂದು
ಹತಶ್ಶೂನ್ಯಾಂಗರಂಧ್ರಹೃತ್ಕ।ಗುರೋಸ್ಸಪ್ತಾಭ್ರತರ್ಕಘ್ನಶ್ಶೂನ್ಯಾಭ್ರಕರ
ಬೋಧರೈ ||೯||ಶುಕ್ರಸ್ಯರಾಮತರ್ಕೇಷುಹತಃಖಾಭ್ರಾಂಬುವಾಹಕೈಃ।ಶಸ್ಸೈ
ಶ್ಚೈಲಾಭ್ರವೇದಘ್ನ ಖತ್ರಯಾಗ್ನೈರ್ವಿಭಾಜಿತಃ ||೧೦|| ಚಂದ್ರೋಚ್ಚ
ಸ್ಯಾಗ್ನಿರುದ್ರಘ್ನಸ್ಸಹಸ್ರೇಣವಿಭಾಜಿತಃ।ರಾಹೋಸ್ತ್ರಿವೇದೈರ್ನಿಘ್ನಾಬ್ದಾಃ
ಖಖನಾಗೈರ್ವಿಭಾಜಿತಾಃ||೧೧||ಲಬ್ಧಂಚಂದ್ರಮುಖಾನಾಂತುಗ್ರಹಾಣಾಂ

ಭಗಣಾದಿಕಂ।ಭವೇಚ್ಚ ಕ್ರಾರ್ಧ್ರತೋ೯ಹೀನಂತಮುಸ್ತುಂಗಂತ್ರಿಭೈರ್ಯುತಂ॥೨।

ಟೀ ॥ ಚಂದ್ರಾದಿಗ್ರಹಗಳಿಗೆ ಗುಣಕಾರಭಾಗಕಾರಸಂಖ್ಯೆಗಳು.

ಗುಣಕಾರಸಂಖ್ಯೆ. ಭಾಗಕಾರಸಂಖ್ಯೆ.

| | | |
|---|---|---|
| ಚಂದ್ರ | ೪೪೨೬ | ೧೨೦೦೦ |
| ಕುಜ | ೩೧೯ | ೬೦೦ |
| ಬುಧ | ೧೪೬ | ೯೬೦ |
| ಗುರು | ೬೦೭ | ೭೨೦೦ |
| ಶುಕ್ರ | ೫೬೩ | ೯೦೦ |
| ಶನಿ | ೪೦೭ | ೧೨೦೦೦ |
| ರಾಹು | ೪೩ | ೮೦೦ |
| ಚಂದ್ರೋಚ್ಚ | ೧೧೩ | ೧೦೦೦ |

ಕಲಿಗತ ಸಂವತ್ಸರಗಳನ್ನು ಆಯಾಯ ಗ್ರಹಗುಣಾಕಾರ ಸಂಖ್ಯೆಯಿಂದ ಗುಣಿಶಿ ಭಾಗ ಸಂಖ್ಯೆಯಿಂದ ಭಾಗಿಸಲು ಚಂದ್ರಾದಿಗಳಿಗೆ ಭಗಣವಾಗುವದು ಶೇಷವನ್ನು ೧೨ರಿಂದ ಗುಣಿಶಿ ಭಾಗಸಂಖ್ಯೆಯಿಂ ಭಾಗಿಸಲು ರಾಶಿಯಾಗುವದು ಶೇಷವಂ ೩೦ ರಿಂದ ಗುಣಿಶಿಭಾಗಸಂಖ್ಯೆಯಿಂಭಾಗಿಸಲು ಭಾಗವಾಗುವದುಶೇಷವಂ ೬೦ ರಿಂದ ಗುಣಿಶಿ ಭಾಗಸಂಖ್ಯೆಯಿಂದ ಭಾಗಿಸಲು ಲಿಪ್ತಿಯಾಗುವದು ಶೇಷವನ್ನು ೬೦ರಿಂದ ಗುಣಿಶಿ ಭಾಗಸಂಖ್ಯೆಯಿಂದ ಭಾಗಿಸಲು ವಿಲಿಪ್ತಿಯಾಗುವದು. ಈ ಭಗಣಾದಿ ಗ್ರಹಗಳಲ್ಲಿ ಭಗಣವನ್ನು ಬಿಟ್ಟು ರಾಶ್ಯಾದಿಗ್ರಹಗಳನ್ನು ಬರದಿಟ್ಟು ರಾಹುವನ್ನು ೬ ರಾಶಿಯಿಂದ ಕಳಯುವದು ಚಂದ್ರೋಚ್ಚಕ್ಕೆ ೩ ರಾಶಿಯನ್ನ ಮಾತ್ರಕೂಡಬೇಕು.

ಉ ದಾ ಹ ರ ಣಂ.

ಕಲ್ಯಬ್ದ ೪೯೭೫ನ್ನು ಚಂದ್ರಗ್ರಹ ಗುಣಕಸಂಖ್ಯೆ ೪೪೨೬ ಇಂದ ಗುಣಿಶಿದ್ದು ೨೨೦೧೯೩೫೦ ಇದನ್ನು ಭಾಗಸಂಖ್ಯೆ ೧೨೦೦೦ ಇಂದ ಭಾಗಿಶಿದ ಲಬ್ದಭಗಣ ೧೮೩೪ ಶೇಷ ೧೧೩೫೦ ವನ್ನು ೧೨ರಿಂದ ಗುಣಿಶಿದ್ದು ೧೩೬೨೦೦ ಭಾಗಸಂಖ್ಯೆ ಇಂದ ಭಾಗಿಶಿದ ಲಬ್ಧರಾಶಿ ೧೧ ಶೇಷ ೪೨೦೦ವನ್ನು ೩೦ರಿಂದಗುಣಿಶಿದ್ದು ೧೨೬೦೦೦ ಭಾಗಸಂಖ್ಯೆಇಂದ ಭಾಗಿಶಿದ ಭಾಗ ೧೦ ಶೇಷ ೬೦೦೦ವನ್ನು ೬೦ರಿಂದ ಗುಣಿಶಿದ್ದು ೩೬೦೦೦೦ ಭಾಗಸಂಖೆಇಂದ ಭಾಗಿಶಿದ ಲಿಪ್ತಿ ೩೦ ಶೇಷವನ್ನು ೬೦ ರಿಂದ ಗುಣಿಶಿ ಪೂರ್ವೋಕ್ತರೀತ್ಯಾ ವಿಲಿಪ್ತಿಯನ್ನು ಸಾಧಿಸುವದು ಹೀಗೆಯೇ ಸಾಧಿತವಾದ ಕುಜಾದಿಗ್ರಹಂಗಳು ಭಗಣಾದಿ ಕುಜ ೨೬೪೫-೦-೧೫-೦-೦ ಬುಧ ೫೭೬-೭-೧೧-೧೫-೦ ಗುರು ೪೯-೫-೧-೧೫-೦ ಶುಕ್ರ ೩೧೧೨-೧-೨೦-೦-೦ ಶನಿ ೧೬೮-೮-೨೪-೪೫-೦ ರಾಹು ೨೬೭-೪-೨೬-೧೫-೦ ಭಗಣವನ್ನುಬಿಟ್ಟು ರಾಶ್ಯಾದಿಯನ್ನು ೬ ರಾಶಿಯಿಂದ ಕಳೆಯಲು ೧-೩-೪೫-೦ ಚಂದ್ರೋಚ್ಚ ೫೬೨-೨-೩-೦-೦ ಇದರಲ್ಲಿ ೩ ರಾಶಿಯನ್ನು ಕೂಡಲು ೫೬೨-೫-೩-೦-೦ ಈ ಗ್ರಹಗಳಲ್ಲಿ ಭಗಣವನ್ನು ಬಿಟ್ಟು ಬರದುಕೊಳ್ಳಬೇಕು.

ಅವ ॥ ಗ್ರಹಗಳಿಗೆ ಅಬ್ದಸಂಸ್ಕಾರಹೇಳಲ್ಪಡುತ್ತೆ.

ಮೂ ॥ ಕಲ್ಯಾದ್ಯಬ್ದಾಶ್ಚಂದ್ರಶೈಲಾಕ್ಷಹಸ್ತೈರ್ಭಕ್ತಾಲಬ್ಧಾನಾಡಿಕಾದ್ಯಂ

ರವೇಸ್ವಂ । ಚಂದ್ರಸ್ಯಾಬ್ದಾ ವ್ಯೋಮಶೂನ್ಯಾಕ್ಷಭಕ್ತಾದ್ಭಾಗಾದ್ಯಸ್ಯಾ
ಲ್ಲಬ್ಧಮೇತದ್ವಿಶೋಧ್ಯಂ ॥ ೧೩ ॥ ಭೌಮಸ್ಯ ಪಂಚನಿಗಮಾಗ್ನಿಭಿ
ರಾಪ್ತಲಬ್ಧಂಸೌಮ್ಯಸ್ಯಖಾಭ್ರಕರ೨೦೦ಭಕ್ತಫಲಂಗುರೋಸ್ತು । ಶೂ
ನ್ಯಾಬ್ಧಿ ರುದ್ರವಿಕೃತಂ ಫಲಮಂಶಕಾದ್ಯಯೋಜ್ಯಂಸಿಜಧ್ರುವಕಭಾಗಕ
ಲಾದಿಭಿಸ್ಸ್ಯಾತ್ ॥ ೧೪ ॥ ಶುಕ್ರಸ್ಯಶೂನ್ಯರೂಪಾಗ್ನಿಫಲಂಭಾಗಾದಿ
ಕಂತ್ಯಜೇತ್ । ಶನೈಶ್ಚತದ್ವ್ಯಯಿನಾಪ್ತಂಧನಂಭಾಗಾದಿಕಂಭವೇತ್॥೧೫॥
ಚಂದ್ರೋಚ್ಚಸ್ಯಕಲೇರ್ಯಾತೊವಹ್ನಿವೇದವಿನಿಘ್ನತಃ।ಶತದ್ವಯೇಂಕೃ
ತಾಲಬ್ಧಂಕಲಾದ್ಯಂಹಿಧನಂಭವೇತ್ ॥೧೬॥ ತಮಸೋಷ್ಟಗುಣಘ್ನಾ
ಬ್ದಾ ವೇದತರ್ಕೇಂದುಭಾಜಿತಾಃ । ಫಲಂಲಿಪ್ತಾದಿಕಂಶೋಧ್ಯಂಸ್ವ
ಧ್ರುವಸ್ಯವಿಶುದ್ಧಯೇ ॥ ೧೭ ॥

ಟೀ ॥ ಕಲಿಗತಾಬ್ದವನ್ನು ೨೫೩೧ರಿಂದ ಭಾಗಿಸಿಬಂದ ಲಿಪ್ತಾದಿ ಫಲವನ್ನು ರವಿಧ್ರುವಕದಲ್ಲಿ ಕೂಡುವದು, ಹೀಗೆ ಕಲ್ಯಬ್ದವನ್ನು ೫೦೦ರಿಂದ ಭಾಗಿಸಿಬಂದ ಭಾಗಾದಿಫಲವನ್ನು ಚಂದ್ರನಲ್ಲಿ ಕಳಯುವದು,ಕಲ್ಯಬ್ದವನ್ನು ೩೪೫ರಲ್ಲಿ ಭಾಗಿಸಿಬಂದ ಭಾಗಾದಿಯನ್ನು ಕುಜನಲ್ಲಾ ೨೦೦ರಿಂದ ಭಾಗಿಸಿಬಂದ ಭಾಗಾದಿಬುಧನಲ್ಲೂ ೧೧೪೦ರಿಂದ ಭಾಗಿಸಿಬಂದ ಭಾಗಾದಿಗುರುವಿನಲ್ಲೂ ಕೂಡುವದು. ೩೧೦ರಿಂದ ಭಾಗಿಸಿಬಂದ ಭಾಗಾದಿಫಲವನ್ನು ಶುಕ್ರನಲ್ಲಿ ಕಳಯುವದು ೨೧೦ರಿಂದ ಭಾಗಿಸಿಬಂದ ಭಾಗಾದಿಯನ್ನ ಶನಿಯಲ್ಲಿ ಕೂಡುವದು, ಕಲ್ಯಬ್ದವಂ ೩೮ರಿಂದ ಗುಣಿಸಿ ೧೬೪ರಿಂದ ಭಾಗಿಸಿಬಂದ ಲಿಪ್ತಾದಿಫಲವನ್ನು ರಾಹುವಿನಲ್ಲಿ ಕಳಯುವದು, ಕಲ್ಯಬ್ದವಂ ೪೩ ರಿಂದ ಗುಣಿಸಿ ೨೦೦ ರಿಂದ ಭಾಗಿಸಿಬಂದ ಕಲಾದಿಫಲವನ್ನು ಚಂದ್ರೋಚ್ಚದಲ್ಲಿ ಕೂಡುವದು, ಹೀಗೆ ಅಬ್ದಸಂಸ್ಕಾರಸಂಸ್ಕೃತ ಮಧ್ಯಗ್ರಹಗಳಾಗುವದು.

ಉದಾ॥ ಪೂರ್ವೋಕ್ತರೀತ್ಯಾಸಾಧಿತವಾದ ಫಲಗಳು, ರವಿ, ಲಿಪ್ತಾದಿ ೧-೫೫ ಭಾಗಾದಿಚಂದ್ರ ೯-೫೨-೦ ಭಾಗಾದಿಕುಜ೧೪-೨೫-೧೨ ಭಾಗಾದಿಬುಧ೨೪-೫೨-೩೦ ಭಾಗಾದಿಗುರು ೪-೨೧-೫೦ ಭಾಗಾದಿಶುಕ್ರ ೧೬-೨-೫೪ ಭಾಗಾದಿಶನಿ ೨೪-೫೨-೩೦ ರಾಹುವಿಗೆ ೩೮ರಿಂದ ಗುಣಿಸಿ ೧೬೪ರಿಂದ ಭಾಗಿಸಿಬಂದ ಲಿಪ್ತಾದಿ೧೧೫೨-೪೪ ಚಂದ್ರೋಚ್ಚಕ್ಕೆ ೪೩ರಿಂದಗುಣಿಸಿ ೨೦೦ರಿಂದ ಭಾಗಿಸಿಬಂದ ಲಿಪ್ತಾದಿ೧೦೯-೩೨ ಈ ಫಲಗಳನ್ನು ಪೂರ್ವೋಕ್ತರೀತ್ಯಾ ಸಂಸ್ಕರಿಸಿದ ವರ್ಷಾಂತಧ್ರುವಗಳೂ ರವಿಮೇಷಸಂಕ್ರಮಣ ಪ್ರವೇಶಧ್ರುವವೂ,ರವಿ ೪-೧೮-೪೩ ಚಂದ್ರ೧೧-೦-೩೩-೦ ಕುಜ ೦-೨೯-೨೫-೧೨ ಬುಧ ೮-೬-೨-೩೦ ಗುರು ೫-೫-೩೬-೫೩ ಶುಕ್ರ ೧-೩-೫೨-೬ ಶನಿ ೯-೧೯-೩೨-೩೦ ರಾಹು ೦-೧೪-೩೨-೧೬ ಚಂದ್ರೋಚ್ಚ ೫-೨೦-೪೮-೩೨.

ಅವ॥ ದ್ಯುಗಣವನ್ನು ಹೇಳಲ್ಪಡುತ್ತೆ.

ಮೂ॥ ಚಂದ್ರಧ್ರುವಾಂಶಾ ಕರಭೂವಿಭಕ್ತಾದ್ಧ್ಯವಂತ್ಯತಿಕ್ರಾಂತದಿ
ನಾನಿತಾನಿ । ಗತರ್ತ್ತವಶ್ಚೈತ್ರಮುಖದಿನೌಘೆಹೀನಾಸಿಚೆದಿಷ್ಟದಿ
ನದ್ಯುಸಂಚಯಃ ॥೧೪॥ ದ್ಯುಗಣೋಯಂಸಪ್ತತಷ್ಟಾಭ್ಯೆಷಂ
ವಾರಧ್ರುವಾನ್ವಿತಂ । ಲಂಕಾಯಾಮರ್ಧರಾತ್ರಸ್ಯಭವಪ್ಯಾರೋಸ
ಸಂಶಯಃ ॥ ೧೫ ॥

ಟೀ॥ ಚಂದ್ರಧ್ರುವರಾಶಿಯನ್ನು ೩ರಿಂದ ಗುಣಿಶಿ ಭಾಗವನ್ನು ಕೇರಿಶಿ ೧೨ ರಿಂದಾಭಾಗಿಶಿ ಬಂದಲಬ್ಧವೆ ಚೈತ್ರಶುಕ್ಲ ಪ್ರತಿಪದಾದಿ ಮೇಷಸಂಕ್ರಮಣ ಪರ‍್ಯಂತದಿನವಾಗುವದು. ಇದಕ್ಕೆ ಯೆಷ್ಟುರುತು ಕಳೆದಿಧೆಯೊ ಅಷ್ಟುಕೂಡಿ ಚೈತ್ರಾದಿ ಇಷ್ಟದಿನ ಪರ‍್ಯಂತ ಸಾವನದಿನ ಸಮೂಹದಲ್ಲಿಕಳದಶೇಷವೇ ಮೇಷಸಂಕ್ರಮಣ ಪ್ರವೇಶಾದಿಇಷ್ಟದಿನ ಪರ‍್ಯಂತಸೌರದ್ಯುಗಣವಾಗುವದು. ಇದರಕೂಡಮೇಷಸಂ ಕ್ರಮಣ ಪ್ರವೇಶಕಾಲಿಕವಾರ ಸಂಖ್ಯೆಯನ್ನು ಕೇರಿಶಿ ೭ ರಿಂದ ಭಾಗಿಸಲು ಲಂಕಾರ್ಧರಾತ್ರಕಾಲಿಕ ಶುಕ್ರವಾರಾದಿಯಾಗಿ ಶೇಷವನ್ನು ತಿಳಯುವದು.

ಉ ದಾ ಹ ರ ಣಂ.

ಭಾವಸಂವತ್ಸರ ವೈಶಾಖಶುಕ್ಲ ೧೫ ಶುಕ್ರವಾರ ಚಂದ್ರಗ್ರಹಣ ಬರುವದರಿಂದ ಆದಿವಸಕ್ಕೆ ಅಹರ್ಗಣವನ್ನು ಸಾಧಿಸಲ್ಪಡುವದು,ಚಂದ್ರಧ್ರುವ೧೧-೦-೩೩-೦ ರಾಶಿಸ್ಥಾನವನ್ನು ೩ರಿಂದ ಗುಣಿಶಿದ್ದು ೩೩೦ ಭಾಗಶೂನ್ಯವಾದ್ದರಿಂದ ಈ ೩೩೦ ಭಾಗವನ್ನೆ ೧೨ರಿಂದ ಭಾಗಿಶಿದ ಲಬ್ಧ ೨೭ ಇದೆ ಅತಿಕ್ರಾಂತದಿನ, ಚೈತ್ರಾದಿ ವೈಶಾಖಶು೧೫ಪರ‍್ಯಂತದಿನ ೪೫ ರಲ್ಲಿ ಅತಿಕ್ರಾಂತದಿನವನ್ನುಕಳದ ಶೇಷವೇದ್ಯುಗಣ ೧೮ ರುತುಗಳು ಕಳಯಲಿಲ್ಲಿವಾಗಿ ಇಲ್ಲಿ ಹೇಳಲಿಲ್ಲ. ದ್ಯುಗಣಕ್ಕೆ ಮೇಷಸಂಕ್ರಮಣ ವಾರ ಸಂಖ್ಯಯಾದ ೪ನ್ನು ಕೂಡಿ ೭ ರಿಂದ ಭಾಗಿಶಿದ ಶೇಷ ೧ ಕಲ್ಯಾದಿಯಲ್ಲಿ ಶುಕ್ರವಾರವಾದ ಕಾರಣ, ಲಂಕಾಪಟ್ಟಣಕ್ಕೆ ಗಣನಕಾಲಾರ್ಧರಾತ್ರ ಸಮಯಕ್ಕೆ ಶುಕ್ರವಾರಾಂತ ವಾಗುವದು.

ಅವ ॥ ಮಧ್ಯಗ್ರಹಸಾಧನೋಪಾಯವು ಹೇಳುತ್ತೆ.

ಮೂ ॥ ದ್ಯುಗಣ ಖನಗಾಂಶೋನೋಭಾಗಾದಿರ್ಮಧ್ಯಮೋರವಿ ।
ಸ್ವೋರ್ಕಘ್ನಾಷ್ಟಾಂಗಾಂಶಯುತಸ್ತೆನೋಪರಿಯುತಶ್ಶಶೀ ॥೨೦ ॥
ಮೆಷಾದ್ಯಹರ್ಗಣಶ್ಯೂನ್ಯಬಾಣಚಂದ್ರೈಃತ್ರಿಭಿಃ ಭಾಜಿತಃ। ಫಲಂ
ಕಲಾದಿಕಂಸೂರ್ಯಚಂದ್ರಯೋಶ್ಯೋಧ್ಯಮನ್ವಹಂ ॥ ೨೧ ॥
ವೇದಘ್ನುದ್ಯುಗಣೋಂಕಾಕ್ಷಿಕರಭಕ್ತೋವನೀಸುತಃ । ವ್ಯೋಮ
ಅಮಹತಃಪಂಚನೇತ್ರಾಕ್ಷಿವಿಹೃತಸ್ತತಃ॥೨೭॥ ದ್ಯುಗಣಸ್ಯೇಶ

ರಾಶ್ಯಗ್ನಿಭಾಗೇನಸಹಿತೋಬುಧಃ। ರೂಪಷಡ್ಗುಣಸಂಭಕ್ತಾದ್ಗು
ರುಸ್ಸ್ಯಾದ್ದ್ಯುಗಣಾಃಕವೇಃ॥೨೩॥ವ್ಯೋಮವೇದಹತೋಂಕಾಬ್ಧಿಶೈಲ
ಭಕ್ತಸ್ತತಃಪರಂ । ಸಪ್ತರಂಧ್ರಾಷ್ಟಸಂಭಕ್ತೋದ್ಯುಗಣಾತ್ತುಶನೈ
ಶ್ಚರಃ॥೨೪॥ತುಂಗಂತ್ರಿಘ್ನೋಷ್ಟಶೂನ್ಯೇಭೈಸ್ತಮಸ್ಯಾತ್ತರ್ಕಷಟ್ಶ
ರೈಃ।ಭಾಗಾದಿಕಾವರ್ಕಚಂದ್ರೌರಾಶ್ಯಾದ್ಯಾಭೂಸುತಾದಯಃ॥೨೫॥
ದ್ಯುಗಣಾತ್ತಾಧಿತಾಶ್ಚಕ್ರತಸ್ಸ್ವಸ್ವಾಬ್ದಧ್ರುವಸಂಯುತಾಃ । ರಾಹು
ರ್ವಿಯೋಜಿತಶ್ಚತೇಭವೇಯುರ್ಮಧ್ಯಮಗ್ರಹಾಃ ॥ ೨೬ ॥

ಟೀ ॥ ದ್ಯುಗಣವನ್ನು ೭೦ರಿಂದ ಭಾಗಿಸಿದ ಭಾಗಾದಿ ಫಲವನ್ನ ದ್ಯುಗಣದಲ್ಲಿ ಕಳಯಲು ಭಾಗಾದಿಮಧ್ಯರವಿ ಯಾಗುವದು. ಅಹರ್ಗಣವನ್ನು ೧೨ರಿಂದ ಗುಣಿಶಿ ೨ ಪ್ರತಿಇಟ್ಟು ೧ ಪ್ರತಿಯನ್ನ ೬೮ರಿಂದ ಭಾಗಿಶಿದ ಭಾಗಾದಿಯನ್ನು ಮತ್ತೊಂದು ಪ್ರತಿಯಲ್ಲಿಕೂಡಿ ಅಹರ್ಗಣವನ್ನು ಕೂಡಲು ಭಾಗಾದಿಮಧ್ಯ ಚಂದ್ರನಾಗುವದು. ದ್ಯುಗಣವನ್ನು ೧೫ರಿಂದ ಭಾಗಿಶಿಬಂದ ಕಲಾದಿಫಲವನ್ನು ರವಿಚಂದ್ರರಲ್ಲಿ ಕಳಿಯಬೇಕು, ದ್ಯುಗಣವನ್ನು ೪ರಿಂದ ಗುಣಿಶಿ ೨೨೯ರಿಂದಭಾಗಿಶಿದ ರಾಶ್ಯಾದಿಕುಜನಾಗುವದು, ಅಹರ್ಗಣವನ್ನು ೩೦ರಿಂದ ಗುಣಿಶಿ ೨೫ರಿಂದ ಭಾಗಿಶಿದ ರಾಶ್ಯಾದಿಯೊಡನೆ ಪುನಃ ದ್ಯುಗಣವನ್ನು ೩೨೫ರಿಂದ ಭಾಗಿಶಿದ ರಾಶ್ಯಾದಿಯನ್ನು ಕೂಡಲು ಬುಧನಾಗುವದು, ಅಹರ್ಗಣವನ್ನ ೩೬೧ರಿಂದ ಭಾಗಿಶಿಬಂದ ರಾಶ್ಯಾದಿಗುರುವಾಗುವದು, ದ್ಯುಗಣವನ್ನು ೪೧ರಿಂದ ಗುಣಿಶಿ ೭೪೯ರಿಂದ ಭಾಗಿಶಿಬಂದ ರಾಶ್ಯಾದಿ ಶುಕ್ರನಾಗುವದು, ಅಹರ್ಗಣವನ್ನು ೮೯೭ರಿಂದ ಭಾಗಿಶಿಬಂದ ರಾಶ್ಯಾದಿ ಶನಿಯಾಗುವದು, ೩೦ರಿಂದ ಗುಣಿಶಿದ ಅಹರ್ಗಣವನ್ನು ೫೬೬ರಿಂದ ಭಾಗಿಶಿಬಂದ ರಾಶ್ಯಾದಿ ರಾಹುವಾಗುವದು. ತ್ರಿಗುಣಿತಾಹರ್ಗಣವನ್ನು ೮೦೮ರಿಂದ ಭಾಗಿಶಿಬಂದ ರಾಶ್ಯಾದಿ ಚಂದ್ರೋಚ್ಚನಾಗುವದು. ಈ ಮಧ್ಯ ಗ್ರಹಗಳನ್ನು ಪೂರ್ವಾನೀತ ವರ್ಷಾಂತಧ್ರುವಗಳಲ್ಲಿ ಯಥಾಕ್ರಮವಾಗಿ ಕೂಡಲು ಶುದ್ಧಮಧ್ಯಗ್ರಹಗಳಾಗುವದು, ರಾಹುಧ್ರುವದಲ್ಲಿ ರಾಹುವನ್ನು ಕಳಿಯಲು ಸ್ಪುಟಶುದ್ಧ ರಾಹುವಾಗುವದು, ರಾಹುವಿಗೆ ೬ ರಾಶಿ ಶೇರಿಶಿದರೆ ಕೇತುವಾಗುವದು.

ಉ ದಾ ಹ ರ ಣ ೦.



ದ್ಯುಗಣ ೧೮ ಇದನ್ನ ೭೦ರಿಂದ ಭಾಗಿಶಿದ ಭಾಗಾದಿಫಲ ೦-೧೫-೨೫ವನ್ನು ಅಹರ್ಗಣದಲ್ಲಿ ಕಳಯಲು ಭಾಗಾದಿ ರವಿ ೧೭-೪೪-೩೫ ದ್ವಾದಶಗುಣಿತದ್ಯುಗಣ ೨೧೬ ಇದನ್ನ ೬೮ರಿಂದ ಭಾಗಿಶಿದ ಭಾಗಾದಿ ೩-೧೦-೩೫ ಯನ್ನ ದ್ವಾದಶಗುಣಿತಾಹರ್ಗಣವಾದ ೨೧೬ ಮತ್ತು ದ್ಯುಗಣವಾದ ೧೮ನ್ನು ಸಹಾ ಕೂಡಿದ್ದು ೨೩೭-

೧೦-೩೫ ಭಾಗಾದಿಚಂದ್ರ, ದ್ಯುಗಣವನ್ನು ೧೫೦ರಿಂದ ಭಾಗಿಶಿದ ಲಿಪ್ತಾದಿಫಲವನ್ನು ೦-೧೭ರವಿ ಚಂದ್ರರಲ್ಲಿ ಶೋಧಿಸಲು, ರವಿ ೧೭-೪೪-೧೮, ಚಂದ್ರ ೨೩೭-೧೦-೧೮ ದ್ಯುಗಣವನ್ನು ೪ರಿಂದ ಗುಣಿಶಿದ್ದು ೭೨ನ್ನ ೨೯ರಿಂದ ಭಾಗಿಶಿಬಂದ ರಾಶ್ಯಾದಿ ೦-೯-೨೫-೫೬ ದ್ಯುಗಣವನ್ನು ೩೦ರಿಂದ ಗುಣಿಸಲು ೫೪೦ ಇದನ್ನು ೨೫ ರಿಂದ ಭಾಗಿಶಿಬಂದ ರಾಶ್ಯಾದಿ ೨-೧೨-೧-೦ ದ್ಯುಗಣವನ್ನು ೩೨೫ರಿಂದ ಭಾಗಿಶಿಬಂದ ರಾಶ್ಯಾದಿ ೦-೧-೩೯-೪೧ನ್ನ ಕೂಡಲು ೨-೧೩-೩೯-೪೧ ಅಹರ್ಗಣವನ್ನು ೩೬೧ರಿಂದ ಭಾಗಿಶಿದ ರಾಶ್ಯಾದಿಗುರು ೦-೧-೨೯-೪೦ ದ್ಯುಸಂಘುವನ್ನು ೪೦ರಿಂದ ಗುಣಿಶಿ ೭೪೯ರಿಂದ ಭಾಗಿಶಿದ ರಾಶ್ಯಾದಿಶುಕ್ರ ೦-೨೮-೫೦-೧೮ ದಿನ ಸಮೂಹವನ್ನು ೮೯೭ರಿಂದ ಭಾಗಿಶಿದ ರಾಶ್ಯಾದಿಶನಿ ೦-೦-೩೬-೨ ಅಹರ್ಗಣವನ್ನು ೫೬೬ರಿಂದ ಭಾಗಿಶಿಬಂದ ರಾಶ್ಯಾದಿರಾಹು ೦-೦-೫೭-೧೪ ದ್ಯುಗಣವನ್ನು ೩ರಿಂದ ಗುಣಿಶಿದ್ದು ೫೪ನ್ನ ೮೦೮ ರಿಂದ ಭಾಗಿಶಿಬಂದ ರಾಶ್ಯಾದಿ ಚಾದ್ರೋಚ್ಚ ೦-೨-೦-೧೮ ಈ ಮಧ್ಯಗ್ರಹಳನ್ನು ವರ್ಷಾಂತಧ್ರುವಗಳೊಡನೆ ಪೂರ್ವೋಕ್ತರೀತ್ಯಾಸಂಸ್ಕರಿಸಿಇಲ್ಲಿಬರೆಯಲ್ಪಟ್ಟಧೆ. ರವಿ ೦-೧೭-೪೪-೩೫ ಚಂದ್ರ ೬-೨೭-೩೬-೨೮ ಕುಜ ೧-೮-೫೧-೮ಬುಧ ೧೦-೧೯-೪೭-೧೧ಗುರು ೫-೭-೬-೩೩ ಶುಕ್ರ ೨-೨-೪೭-೨೪ ಶನಿ ೯-೨೦-೧೩-೩೭ ರಾಹು ೦-೧೩-೩೫-೧೦ ಚಂದ್ರೋಚ್ಚ ೫-೨೨-೪೯-೫೫.

ಅವ ॥ ಪೂರ್ವೋಕ್ತಗ್ರಹಗಳನ್ನ ಅರ್ಧರಾತ್ರಚಾಲನೆಹೇಳುತ್ತೆ.

ಮೂ ॥ ಗ್ರಹಾಣಾಂಮಧ್ಯಗತಯಸ್ಸಂಕ್ರಾಂತಿಘಟಿಕಾಹತಾಃ। ಷಷ್ಟಿಭಕ್ತ
ಫಲಂಶೋಧ್ಯಂಗ್ರಹೇಷುಸ್ಯಾತ್ಕಲಾದಿಕಂ ॥ ೨೭ ॥

ಟೀ ॥ ಗ್ರಹಮಧ್ಯಗತಿಗಳನ್ನು ಸಂಕ್ರಮಣಘಳಿಗೆಗಳಿಂದ ಗುಣಿಶಿ ೬೦ರಿಂದ ಭಾಗಿಶಿಬಂದ ಲಿಪ್ತಾವಿಲಿಪ್ತಿಗಳನ್ನು ಮಧ್ಯಗ್ರಹದಲ್ಲಿ ಕಳದು ರಾಹುವಿನಲ್ಲಿ ಕೂಡಲು ಅರ್ಧರಾತ್ರಿಕಾಲಿಕ ಗ್ರಹವಾಗುವದು.

## ಉ ದಾ ಹ ರ ಣಂ.



ಸಂಕ್ರಮಣಘಳಿಗೆ ೧೮-೪೭ ಇಂದಗ್ರಹಗಳ ಮಧ್ಯಗತಿಗಳನ್ನು ಗುಣಿಶಿ ೬೦ರಿಂದ ಭಾಗಿಶಿಬಂದಫಲ ರವಿಗೆ ೧೮-೩೦ ಚಂದ್ರನಿಗೆ ೪-೨೭-೨೯ ಕುಜನಿಗೆ ೯-೫೧ ಬುಧನಿಗೆ ೧-೧೬-೫೧ ಗುರುವಿಗೆ ೧-೩೪ ಶುಕ್ರನಿಗೆ ೩೦-೫ ಶನಿಗೆ ೦-೩೫ ರಾಹುವಿಗೆ ೦-೫೯ ಚಂದ್ರೋಚ್ಚಕ್ಕೆ ೨-೫ ಇದನ್ನು ಸಂಸ್ಕರಿಶಿದ ಅರ್ಧರಾತ್ರ ಕಾಲಿಕ ಗ್ರಹಗಳು ರವಿ ೦-೧೭-೨೬-೫ ಚಂದ್ರ ೬-೨೩-೩೫-೫೯ ಕುಜ ೧-೮-೪೧-೧೮ ಬುಧ ೧೦-೧೮-೩೦-೧೯ ಗುರು ೫-೭-೪-೫೯ ಶುಕ್ರ ೨-೨-೧೭-೧೯ ಶನಿ ೯-೨೦-೧೩-೨ ರಾಹು ೦-೧೩-೩೬-೧೧.

ಅವ॥ ಅರ್ಧರಾತ್ರಿಗ್ರಹವನ್ನು ಮಧ್ಯಾಹ್ನಕಾಲಸಾಧನವಂ ಹೇಳುತ್ತೆ.

ಮೂ ॥ ಏವಂನಿಶ್ಯರ್ಧಭವಾಃಖೇಟಾಃಸ್ವಸ್ವಾರ್ಧಭುಕ್ತಿವಿಯುತಾಶ್ಚ ।
ಸಹಿತಾಸ್ತೆಪೂರ್ವಾಪರದಿನದಳಕಾಲೀನಖೇಚರಾಸ್ಯುರಿಮೇ ॥೨೮॥

ಟೀ ॥ ಗ್ರಹಗಳಗತಿಯಲ್ಲಿ ಅರ್ಧಭಾಗವಂ ಕಳೆಯಲು ಪೂರ್ವದಿನಮಧ್ಯಾಹ್ನ ಕಾಲಿಕವಾಗುವದ ಕೂಡಲು ಪರದಿನಮಧ್ಯಾಹ್ನ ಕಾಲಿಕವಾಗುವದು ಪಾದಗತಿಕಳೆಯಲು ಅಸ್ತಕಾಲಗ್ರಹವಾಗುವದು ಕೂಡಲು ಉದಯಕಾಲಗ್ರಹವಾಗುವದು. ರಾಹುವಿಗೆ ವಿಲೋಮವಾಗಿ ಮಾಡುವದು.

ಉ ದಾ ಹ ರ ಣ ೦.

ಗ್ರಹಗತಿಗಳ ಅರ್ಧವನ್ನು ಕಳೆಯಲು ಮಧ್ಯಾಹ್ನ ಗ್ರಹವಾಗುವದು ರವಿ ೧-೧೬-೫೬-೩೧ ಚಂದ್ರ ೬-೧೭-೦-೪೯ ಕುಜ ೧-೮-೨೫-೩೫ ಬುಧ ೧೦-೧೭-೨೭-೩೨ ಗುರು ೫-೭-೨-೨೯ ಶುಕ್ರ ೨-೧-೨೯-೧೫-ಶನಿ ೯-೨೦-೧೨-೦ ರಾಹು ೦-೧೩-೩೭-೩೬ ಚಂದ್ರೋಚ್ಚ ೫-೨೭-೪೪-೩೦ ॥

ಅವ ॥ ಇಷ್ಟಕಾಲಗ್ರಹಸಾಧನವನ್ನು ಹೇಳುತ್ತದೆ.

ಮೂ ॥ ಗತಗಮ್ಯಕಾಲನಿಹತಾಗ್ರಹಗತಯಷ್ಷಷ್ಟಿಭಕ್ತತಃಪ್ರಾಪ್ತಂಫಲ
ಮಯುತಾಸ್ಸಹಿತಾತ್ತತ್ಕಾಲಭವಾಸ್ಸ್ಯುಸ್ಸಮಸ್ತಗಗನಚರಾಃ ॥

ಟೀ ॥ ೨೯ ನೆಶ್ಲೋಕದಲ್ಲಿ ಹೇಳಿದಂತ ಇಷ್ಟಘಳಿಗೆಇಂದ ಗ್ರಹಗತಿಯನ್ನುಗುಣಿಸಿ ೬೦ ರಿಂದ ಭಾಗಿಸಿದ ಲಬ್ಧವನ್ನು ಅದರಂತೆಯೇ ಗತವಾದರೆ ಕಳಯುವದು ಗಮ್ಯವಾದರೆ ಕೂಡುವದು ರಾಹುವನ್ನು ವ್ಯತ್ಯಸ್ತವಾಗಿ ಸಂಸ್ಕರಿಸುವದು.

ಅವ ॥ ಗ್ರಹಮಧ್ಯಗತಿಯನ್ನು ಹೇಳಲ್ಪಡುತ್ತದೆ,

ಮೂ ॥ ರವಿಗತಿರೇಕದಿನಸ್ಯಾನ್ನವಶರಲಿಪ್ತಾಭಿರಷ್ಟವಿಕಲಾಭಿಃ ಚಂದ್ರ
ಸ್ಯಾಖಾಂಕಶೈಲೈಃಪಂಚಾಗ್ನಿರೆವಭುಕ್ತಿರೇಕದಿನೇ॥೩೦॥ ಭೌಮಸ್ಯ
ಭೂಮಿರಾಮೈಃಷಣ್ಣೇತ್ರೈಶ್ಚಶಿಸುತಸ್ಯಬಾಣಜಿನೈಃದಂತೈಶ್ಚಾ
ಥಗುರೋಸ್ಸ್ಯಾತ್ಪಂಚಕಲಾಭಿಸ್ತುಶೂನ್ಯವಿಕಲಾಭಿಃ ॥೩೧॥ ಶುಕ್ರ
ಸ್ಯಾಂಗನವೈರ್ಲಿಪ್ತಾಂಕೈರಷ್ಟಾಗ್ನೈಶ್ಚಸೂರ್ಯತನಯಸ್ಯ।ನೇತ್ರೈಸ್ತಮ
ಸೋರಾಮೈರ್ವಿಕಲಾಂಕೈಶ್ಯಿವಿಧುತ್ರೈರ್ವಿಧೂಚ್ಚಸ್ಯ ॥ ೩೨ ॥ ರಸಲಿ
ಪ್ತಾಂಕೈರ್ವಿಕಲಾಂಕೈರೂಭಿರ್ವೇದೈರ್ಗತಿಸ್ತುಚಕ್ರಸ್ಯ । ಏಕಸ್ಮಿನ್ನ
ಬ್ದೆವಿಕಲಾದ್ಯೈರ್ಗತಿರಬ್ಧಿಬಾಣೈರೇವ ॥ ೩೩ ॥

ಟೀ ॥ ರವಿದಿನಗತಿ ೫೯-೮ ಚಂದ್ರದಿನಗತಿ ೭೯೦-೩೫ ಕುಜ ೩೧-೨೬ ಬುಧ ೨೪೫-೩೨ ಗುರು ೫-೦ ಶುಕ್ರ ೯೬-೮ ಶನಿ ೨-೦ ರಾಹು ೩-೧೧ ಚಂದ್ರೋಚ್ಚ ೬-೪೧ ಲಿಪ್ತಿ ವಿಲಿಪ್ತಿಯಾಗಿ ತಿಳಿಯಬೇಕು.

ಅವ ॥ ರವ್ಯಾದಿಗಳಿಗೆ ಕಲ್ಯಾದಿಕಾಲಕ್ಕೆ ಮಂದೋಚ್ಚ ಹೇಳುತ್ತದೆ.

ಮೂ ॥ ಮಂದೊಚ್ಚಧ್ರುವಕಶ್ಚಕ್ಷುರ್ವಸುರೂಪಶರೇಂದವಃ।ವೇದಾಂಕನಗ ಬಾಣಾಕ್ಷಿನಿಗಮಾಭೂಸುತಧ್ರುವಃ॥೨೪॥ಶೈಲಾಶಾಂಕಧರಾವಹ್ನಿಭೂಮಯಶ್ಚಂದ್ರಜಸ್ಯಚ।ಪಂಚಾಕ್ಷಿಕರಷಡ್ಬಾಹುವೇದಾದೇವಗುರೋಸ್ತತಃ॥೨೫॥ಕರಾಂಕರೂಪನಿಧ್ಯಗ್ನಿವಹ್ನಿಬಾಣಾಂಕವೇರ್ಭವೇತ್ । ಶನ್ಯೇರಷ್ಟಾಕ್ಷಿನಾಗೇಂದುನವಾಕ್ಷೀಣಿಕ್ರಮಾದಿಮೇ ॥ ೨೬ ॥

ಟೀ ॥ ಮಂದೋಚ್ಚಧ್ರುವ ರವಿ ೨-೧೮-೧೫-೦ ಕುಜ ೪-೯-೫೭-೪೨ ಬುಧ ೭-೧೦-೧೯-೧೩ ಗುರು ೫-೨೨-೬-೪೨ ಶುಕ್ರ ೨-೧೯-೩೯-೫೩ ಶನಿ ೮-೨-೧೮-೨೯ ಕಲ್ಯಾದಿಕಾಲಿಕವು.

ಅವ ॥ ಮಂದೊಚ್ಚಹಾರಕವು ಹೇಳುತ್ತದೆ.

ಮೂ ॥ ಶೈಲೇಂದುಬಾಣೈರ್ಗಗನಾಷ್ಟನಂದ್ಯೈಃಕೃತಾಬ್ಧಿಬಾಣೈರ್ನಯನಾಶ್ವಿನೇತ್ರೈಃ। ಯುಗಾದ್ರಿರಾಮೈರ್ಗಜಭಾನುಬಾಣೈರ್ದ್ವಿನಿರ್ಹ್ನಿತಾಸ್ಯುರ್ವಿಬುಧೈಸ್ತುಹಾರಕಾಃ ॥ ೨೭ ॥

ಟೀ ॥ ರವಿಕುಜಾದಿಗಳಿಗೆ ಮಂದೋಚ್ಚಸಂಸ್ಕಾರಹಾರಕಗಳು ರವಿ ೫೧೭-ಕುಜ ೯೮೦ ಬುಧ ೫೪೪ ಗುರು ೨೨ ಶುಕ್ರ ೩೭೪ ಶನಿ ೧೨೮ ವಿದ್ವಾಂಸರುಗಳಿಂದ ನಿಶ್ಚಯಿಸಲ್ಪಟ್ಟಿದೆ

ಅವ ॥ ಮಂದೋಚ್ಚಸಂಸ್ಕಾರ ಹೇಳುತ್ತದೆ.

ಮೂ ॥ ರವಿಭೌಮಬುಧಾದೀನಾಂಹಾರಕೈಃಕಲಿವತ್ಸರಾಃ ।
ಭಕ್ತಾಕಲಾದಿಕಂಯೋಜ್ಯಂಪಲಂಸ್ವಸ್ವಧ್ರುವೇಷುವೈ ॥ ೨೮ ॥

ಟೀ ॥ ಕಲಿಗತಾಬ್ದವನ್ನು ತತ್ತದ್ಗ್ರಹಹಾರಕದಿಂದ ಭಾಗಿಸಿ ಬಂದಕಲಾದಿ ಫಲವನ್ನು ತತ್ತದ್ಗ್ರಹಮಂದೋಚ್ಚಧ್ರುವಕದಲ್ಲಿಕೂಡಲು ತಾತ್ಕಾಲಿಕಮಂದೋಚ್ಚವಾಗುವದು

ಉ ದಾ ಹ ರ ಣ ೦.

ಪೂರ್ವೋಕ್ತರೀತ್ಯಾ ಹಾರಕದಿಂದ ಭಾಗಿಸಿಬಂದಫಲ, ಸಂಸ್ಕೃತಮಂದೋಚ್ಚವು. ರವಿ ೨-೧೮-೨೪-೩೭ ಕುಜ ೪-೧೦-೨-೪೬ ಬುಧ ೭-೧೦-೨೮-೨೨ ಗುರು ೫-೨೨-೨೯-೬ ಶುಕ್ರ ೨-೧೯-೫೩-೧೨-ಶನಿ ೮-೨-೧೯-೨೩.

ಅವ ॥ ಕುಜಾದಿಗಳಿಗೆ ಪಾತಧ್ರುವವನ್ನು ಹೇಳಲ್ಪಡುತ್ತೆ.

ಮೂ ॥ ಭೌಮಸ್ಯವಿಪಾತಸ್ಯಾತ್ಪಾಬ್ಧ್ಯಂಶೈಶ್ಚಂದ್ರಜಸ್ಯವಿಂಶತಿಭಿಃ।ಜೀವಸ್ಯಾಶೀತ್ಯಂಶೈರ್ಭೃಗುಜಸ್ಯತುಷಷ್ಟಿಭಿಶ್ಯತ್ಯೈಸ್ತುಶನೇಃ ॥ ೨೯ ॥

ಟೀ ॥ ಕುಜಾದಿಗಳಿಗೆ ಪಾತಭಾಗಗಳನ್ನ ಧ್ರುವರೂಪದಿಂದ ಹೇಳುತ್ತಾರೆ.

ಕುಜ ೪೦ ಬುಧ ೨೦ ಗುರು ೮೦ ಶುಕ್ರ ೬೦ ಶನಿ ೧೦೦ ಪಾತ ಭಾಗಂಗಳು.

ಅವ || ದೇಶಾನ್ತರ ಸಂಸ್ಕಾರವನ್ನು ಹೇಳಲ್ಪಡುತ್ತೆ.

ಮೂ || ಸ್ವಪುರಸ್ಯಾವನೀಮಧ್ಯರೇಖಾಯೋಶ್ಚಾಂತರಸ್ಥಿತೈಃ ।
ಯೋಜನೈರ್ನಿಹತಾಶ್ಯಾನವ್ಯೋಮಾಷ್ಟಾಬ್ಧಿಹೃತಾಗತಾಃ ||೪೦ ||
ಫಲಂಕಲಾಧಿಭೂಮಧ್ಯರೇಖಾಯಾ ಪೂರ್ವದೇಶತಃ । ರುಣಂಕು
ರ್ಯಾದ್ಧನಂಪಶ್ಚಾದ್ಗ್ರಹೇಕಾರಾತ್ಪತಿಕೋತ್ತಮಾಃ || ೪೧ ||
ಇತಿಶ್ರೀಶಂಕರಭಾರತೀವಿರಚಿತೇಖಚರ
ದರ್ಪಣೇ ಪ್ರಥಮೋಧ್ಯಾಯಃ.



ಟೀ || ಭೂಮಧ್ಯರೇಖೆಗೂ ಸ್ವದೇಶಕ್ಕೂ ಇರುವ ಅಂತರಾಳ ಯೋಜನ ದಿಂದ ಗ್ರಹಮಧ್ಯಗತಿಯನ್ನು ಗುಣಿಸಿ ೪೮೦೦ ರಿಂದ ಭಾಗಿಸಿ ಬಂದಕಲಾದಿ ಫಲ ವನ್ನು ಭೂಮಧ್ಯರೇಖೆಗಿಂತಲೂ ಪೂರ್ವದೇಶವಾದರೆ ಗ್ರಹಗಳಲ್ಲಿ ಕಳಯಬೇಕು ಪಶ್ಚಿಮದೇಶದವರಾದರೆ ಗ್ರಹದಲ್ಲಿ ಕೂಡಬೇಕು ಹೀಗೆ ಸಂಸ್ಕರಿಸಿದರೆ ಸ್ವದೇಶೀ ಯ ಗ್ರಹಗಳಾಗುವವು.

ಉ ದಾ ಹ ರ ಣ ೦.

ಕುಂಡಿನೀನಗರಕ್ಕೆ ಭೂರೇಖೆಗೆ ಪೂರ್ವಯೋಜನ ೪೦ ಇದರಿಂದ ಗ್ರಹಗ ತಿಯಂ ಗುಣಿಸಿ ೪೮೦೦ ರಿಂದ ಭಾಗಿಸಿ ಬಂದಫಲ ರವಿ ೦-೨೯ ಚಂದ್ರ ೬-೪೫ ಕು ಜ ೦-೧೫ ಬುಧ ೨-೨ ಗುರು ೦-೨ ಶುಕ್ರ ೦-೪೮ ಶನಿ ೦-೧ ರಾಹು ೦-೧ ಚಂ ದ್ರೋಚ್ಚ ೦-೩ ಪೂರ್ವದೇಶವಾದ್ದರಿಂದ ಗ್ರಹಗಳಲ್ಲಿ ಕಳಯಬೇಕು.

ಇಂತು ಕೊಳ್ಳೇಗಾಲ ಜಟಾವಲ್ಲಭ ರಾಮಾನುಜಾಚಾರ್ಯರ
ವರ್ಯತನೂಭವ ಕೃಷ್ಣದೈವಜ್ಞ ವಿರಚಿತವಾದ
ಭಾವಬೋಧಿನೀ ಎಂಬ
ಖಚರದರ್ಪಣದ ಟೀಕಿನೋಳ್
ಮಧ್ಯಗ್ರಹ ನಾಮಕ ಪ್ರಥಮಾಧ್ಯಾಯವು
ಸಂಪೂರ್ಣವಾದುದು.





ಶ್ರೀ.

# ಖ ಚ ರ ದ ರ್ಪ ಣ ಗ್ರಂ ಥ.

## ಮಂದಸ್ಫುಟಾಧ್ಯಾಯಪ್ರಾರಂಭ.

---

ಮಂ॥ ಯಸ್ಸರ್ವಹೃದಯಾಂತರ್ವರ್ತೀಚಿನ್ಮಯಸ್ಸಾರ್ವತ್ರಿಕಾಧಿಪಃ ।
ನತ್ವಾತಮಾತ್ಮರೂಪಂಖೇಟಸ್ಫುಟಂ ಮಾಂದಕರ್ಮ ವಕ್ಷ್ಯಾಮಿ ೧॥

ಟೀ॥ (ಈಶ್ವರಸ್ಸರ್ವಭೂತಾನಾಂಹೃದ್ದೇಶೇರ್ಜುನತಿಷ್ಠತಿ) ಎಂಬಂತೆ ಯಾವ ಪರಮಾತ್ಮನು ಸಮಸ್ತಜನಗಳ ಹೃದಯಾಂತರ್ವರ್ತಿಯಾಗಿಯೂ ಶುದ್ಧಜ್ಞಾನಮಯನಾಗಿಯೂ ದೇವತಾಸಮೂಹಕ್ಕೆಲ್ಲಾ ಸ್ವಾಮಿಯಾಗಿಯೂ ಇದ್ದಾನೆಯೋ ಪರಬ್ರಹ್ಮಸ್ವರೂಪನಾದ, (ಆತ್ಮಾನಂಯೋವಿಜಾನೀಯಾದಹಮಸ್ಮೀತಿಪೂರುಷಃ) ಎಂಬಂತೆ ಅಂಥಾ ಸತ್ಯಸ್ವರೂಪನನ್ನು ನಮಸ್ಕರಿಸಿ ಸ್ಫುಟೀಕರಣೋಪಯೋಗವಾಗಿರುವ ಮಂದಕರ್ಮ ಮಂದೋಚ್ಚಶೋಧನದಿಂದ ಸಾಧಿಸಲ್ಪಟ್ಟ ಕೇಂದ್ರಲಬ್ಧವಾದ ಫಲಸಂಸ್ಕಾರೋಪಾಯವನ್ನು ಹೇಳುತ್ತೇನೆ.

ಅವ ॥ ಕೇಂದ್ರಭುಜಕೋಟಿಸಾಧನವನ್ನು ಹೇಳಲ್ಪಡುತ್ತೆ.

ಮೂ॥ ಮಧ್ಯಮಖೇಟವಿಹೀನಂಮಂದೋಚ್ಚಂಕೇಂದ್ರನಾಮಕಂತತ್ತು
ತ್ರಿಭತಸ್ಸ್ವಲ್ಪಂದೋಸ್ಸ್ಯಾದಧಿಕೇಷಡ್ಭೋನಿತಂಚತದಧಿಕತಃ ॥೨॥
ಷಡ್ರಾಶ್ಯೂನಂನವತೋಯದ್ಯಧಿಕಂಚಕ್ರಶುದ್ಧಮೇವಭುಜಃ ।
ಕೇಂದ್ರೇಮೇಷಘಟಸ್ಥೇಕ್ರಮತಸ್ಸ್ವರ್ಣಂಭವೇದ್ಗ್ರಹೇಬಾಧಃ ॥ ೩ ॥
ಓಜೇತ್ಯುಗ್ಮೇತ್ಯೇವಂಕೇಂದ್ರಾತ್ಪದಚತುಷ್ಟಯಂಚಾತ್ರ ।
ಓಜೇಭುಜಸ್ತುಯಾತೋಯುಗ್ಮೇಗಮ್ಯಸ್ತ್ರಿಭೋನತಃಕೋಟಿಃ ॥೪॥
ಓಜಾತ್ಕೇಂದ್ರಾದ್ಗಮ್ಯಾಯುಗ್ಮಾತ್ಕೋಟಿಸ್ಸದಾಭವತಿ ।
ಭುಜಕೋಟಿಜ್ಯೆಸಾಧ್ಯೇಜ್ಯಾರ್ಧೈರ್ಭುಜಕೋಟಿಜನ್ಯಫಲಸಿದ್ಧ್ಯೈ॥ ೫॥

ಟೀ ॥ ರವ್ಯಾದಿಮಧ್ಯಗ್ರಹವನ್ನು ಆಯಾಯಗ್ರಹ ಮಂದೋಚ್ಚಗಳಲ್ಲಿ (ಚಂದ್ರನಂಚಂದ್ರೋಚ್ಚದಲ್ಲಿ) ಕಳೆಯಲು ಕೇಂದ್ರವಾಗುವದು. ಈ ಮಂದಕೇಂದ್ರರಾಶಿಸ್ಥಾನವು ೩ ಕ್ಕಿಂತಲೂ ಅತಿಕ್ರಮಿಸದೆ ಇದ್ದಾಗ ಅದೇಭುಜ ೩ ರಾಶಿಗೆ ಹೆಚ್ಚಾಗಿ ೬ ರಾಶಿಗಿಂತ ಕಡಿಮೆಯಾದಾಗ ೬ ರಾಶಿಯಿಂದ ಕಳೆದದ್ದು ಭುಜ ೬ ರಾಶಿಗೆ ಅಧಿಕವಾಗಿ ೯ ರಾಶಿಗಿಂತ ಕಡಿಮೆಯಾದರೆ ರಾಶಿಯಲ್ಲಿ ಮಾತ್ರ ೬ ಕಳೆದುಮಿಕ್ಕದ್ದೇಭುಜ ೯ ರಾಶಿಗೆ ಅಧಿಕವಾದಾಗ ೧೨ ರಿಂದ ಕಳೆದದ್ದೇಭುಜ ಕೇಂದ್ರರಾಶಿತ್ರಯ (ಮಿಥುನರಾಶ್ಯಂತ) ದವರಿಗೂ ಓಜಪದವು ಅನಂತರ ೬ ರಾಶಿ (ಕನ್ಯಾಂತದ) ವರಿಗೂ ಯುಗ್ಮಪದ ನಂತರ ೯ ರಾಶಿ (ಧನುರಂತದ) ವರಿಗೂ ಓಜಪದವು ನಂತರ

೧೨ ರಾಶಿ (ಮೀನಾಂತ್ಯದ) ವರಿಗೂ ಯುಗ್ಮಪದವೆಂದು ತಿಳಿಯತಕ್ಕದ್ದು. ಭುಜ ಕ್ಕೂ ೩ ರಾಶಿಗೂ ಉಳ್ಳ ಅಂತರವೇ ಕೋಟಿ ಅಂದರೆ ಭುಜವನ್ನು ೩ ರಾಶಿಯಿಂದ ಕಳಿದಶೇಷವೇ ಕೋಟಿ. ಓಜಪದಕೇಂದ್ರವಾದಾಗ ಗಮ್ಯಕೋಟಿಯೆಂತಲೂ ಯು ಗ್ಮಪದಕೇಂದ್ರವಾದಾಗ ಗತಕೋಟಿಯೆಂತಲೂ ತಿಳಿಯಬೇಕು ಭಚಕ್ರರೇಖೆಯ ನ್ನು ವಕ್ರವಾದ ಧನುಸ್ಸಾಗಿಯೂ ತಿಳಿದು ಭುಜಕೋಟಿಗಳಿಂದ ಜ್ಯಾರ್ಧವನ್ನು ಸಂಪಾದಿಸಿ ಮೇಷಾದಿಕೇಂದ್ರವಾದರೆ ಧನಭುಜಾಫಲವೆಂದು ಮಧ್ಯಗ್ರಹದಲ್ಲಿ ಕೂಡುವದು ತುಲಾದಿಕೇಂದ್ರವಾದರೆ ರುಣಭುಜಾಫಲವೆಂದು ಮಧ್ಯಗ್ರಹದಲ್ಲಿ ಕಳಿ ಯುವದೆಂದು ಭಾವವು.

ಅವ ॥ ಇನ್ನು ಜ್ಯಾರ್ಧವನ್ನು ಹೇಳಲ್ಪಡುತ್ತೆ.

ಮೂ ॥ ಪ್ರಥಮಜ್ಯಾರ್ಧಸ್ಸಾಂಘ್ರ್ಯಬ್ಧಿರಂಶೈಸ್ಸಾದ್ವಿತೀಯರಾಶಸ್ತು ।
ಸಿಂಜಿನ್ಯರ್ಧಸ್ಸಗದತ್ರ್ಯಂಶೈರ್ದ್ವ್ಯಂಶೈಸ್ತೃತೀಯಜೀವಾರ್ಧಂ ॥

ಟೀ ॥ ಪ್ರಥಮಜ್ಯಾರ್ಧ ೪ ಭಾಗ ೧೫ ಲಿಪ್ತಿಗಳು ದ್ವಿತೀಯಜ್ಯಾರ್ಧ ೩ ಭಾಗ ೩೦ ಲಿಪ್ತಿಗಳು ತೃತೀಯಜ್ಯಾರ್ಧ ೨ ಭಾಗವು ಎಂದು ಧ್ರುವರೂಪವಾಗಿ ಹೇಳ ಲ್ಪಟ್ಟಿತು ॥ ೬ ॥

ಅವ ॥ ಇಷ್ಟಜ್ಯಾಸಾಧನೋಪಾಯವು ಹೇಳಲ್ಪಡುತ್ತೆ.

ಮೂ ॥ ಏತಾಃಕ್ರಮೇಣಭಾಗಾದ್ಧ್ರೈರ್ನೇತ್ರನಿಘ್ನಭಾಗ್ಯೈಶ್ಚ । ತುಲ್ಯಕಲೊನಾ
ಸ್ತ್ವಿಷ್ಟಜ್ಯಾಸ್ಸ್ಯುರ್ದ್ವಿಘ್ನಾಶ್ಚಬಾಹುರೂಪೇಣ ॥ ೭ ॥

ಟೀ ॥ ಕೇಂದ್ರರಾಶಿಸ್ಥಾನ ಶೂನ್ಯವಾದರೆ ಭಾಗಾದಿಯನ್ನು ಅರ್ಧಿಕಲಾದಿ ಯೆಂದು ಭಾವಿಸಿ ಪ್ರಥಮಜ್ಯಾರ್ಧಧ್ರುವಕಲಾದಿಯನ್ನು ಕೂಡುವದು ರಾಶಿಸ್ಥಾನ ದಲ್ಲಿ ೧ ಇದ್ದರೆ ಇದರ ಅರ್ಧವಾದ ೧೫ ಭಾಗವನ್ನು ಕಲಾದಿಯಾಗಿ ಭಾವಿಸಿ ಪ್ರಥ ಮಜ್ಯಾರ್ಧ ಧ್ರುವಕಲೆಯಲ್ಲಿಕೂಡುವದು ಆಗಧ್ರುವಭಾಗವು ೪ ಕ್ಕೆ ಆಗುವದು ೧ ಕ್ಕೆ ಅಧಿಕವಾಗಿ ೨ ಕ್ಕೆ ಕಡಮೆಯಾದಾಗ ಭಾಗಾದಿಯನ್ನು ಕಲಾದಿಯಾಗಿ ಭಾ ವಿಸಿ ದ್ವಿತೀಯಜ್ಯಾರ್ಧ ಧ್ರುವದಲ್ಲಿ ಕೂಡುವದು, ರಾಶಿಯಲ್ಲಿ ೨ ಇದ್ದರೆ ಅರ್ಧವಾ ದ ೩೦ ಭಾಗವನ್ನು ಕಲಾದಿಯಾಗಿ ಭಾವಿಸಿ ದ್ವಿತೀಯಜ್ಯಾರ್ಧ ಧ್ರುವದಲ್ಲಿ ಕೂಡು ವದು, ೨ ರಾಶಿಗೆ ಅಧಿಕವಾದಾಗ ರಾಶಿಯಬಿಟ್ಟು ಭಾಗಾದಿಯನ್ನು ದ್ವಿಗುಣಿಸಿ ಕಲಾದಿಯನ್ನಾಗಿ ಭಾವಿಸಿ ತೃತೀಯಜ್ಯಾರ್ಧದಲ್ಲಿ ಕೂಡುವದು ಹೀಗೆ ಮಾಡಿದಜ್ಯಾ ರ್ಧವನ್ನು ೨ ರಿಂದ ಗುಣಿಶಿದರೆ ಭುಜಕ್ಕೆ ಇಷ್ಟಜ್ಯೆಯಾಗುವದು ॥ ೭ ॥

ಅವ ॥ ಇಷ್ಟಜ್ಯಾಸ್ಪಷ್ಟೋಪಾಯವು.

ಮೂ ॥ ಬಾಹೋಃಕೋಟೇರ್ದ್ವಾರಾಶಾಂಶೂನ್ಯಂಯದಿತದೇವಸಂಸ್ಥಾಪ್ಯಂ।
ಏಕಶ್ಚೇತ್ತ್ರಿಯುತೋರ್ಧೈರಾಶಿಸ್ಥೆಯದಿಶರೇಣಸಂಯೋಜ್ಯೆ॥ ೮॥

ಅಥಭುಜಕೋಟ್ಯೋರ್ಜ್ಯಾಭ್ಯಾಂಭಾಗಕಲಾದ್ಯಂಹತಂಖತರ್ಕಹೃತಂ।
ಮಧ್ಯಯುತಂತದಧೋಧಃಕ್ಷೇಪಾತ್ಸ್ಯಾತಾಂಹಿಬಾಹುಕೋಟಿಜ್ಯೇ॥ ೯॥

ಟೀ॥ ಭುಜಜ್ಯಾ ಸಾಧನದಲ್ಲಿ ಭುಜಜ್ಯೆಯೇ ಪ್ರಕೃತ ಕೋಟಿಜ್ಯಾ ಸಾಧನದಲ್ಲಿ ಕೋಟಿರಾಶ್ಯಾದಿಯೇ ಪ್ರಕೃತ ರಾಶಿಸ್ಥಾನ ಶೂನ್ಯವಾದರೆ ಅದೆ ಗ್ರಹಿಸತಕ್ಕದ್ದು ರಾಶಿ ೧ ಇದ್ದರೆ ೩ ರಾಶಿಕೂಡಿ ೪ ನ್ನಾಗಿ ಗ್ರಹಿಸುವದು ೨ ರಾಶಿ ಇದ್ದರೆ ೫ ಕೂಡಿ ೭ ನ್ನಾಗಿ ಗ್ರಹಿಸುವದು ಇವುಗಳನ್ನ ಭಾಗಾದಿಯನ್ನಾಗಿ ಭಾವಿಸಿ ಭುಜಕ್ಕಾದರೂ ಕೋಟಿಗಾದರೂ ಅವುಗಳಿಗೆ ಉಚಿತವಾದ ಇಷ್ಟಜ್ಯಾರ್ಧದಿಂದ ಭಾಗಾದಿಗಳನ್ನ ಚತುಷ್ಪದ ನ್ಯಾಯದಿಂದಾ ಗುಣಿಶಿ ಸವರ್ಣಿಶಿ ಪೂರ್ವ ಗ್ರಹಿಸಲ್ಪಟ್ಟ ಭಾಗಕ್ಕೆ ಯಥಾಸ್ಥಾನ ಕೂಡಬೇಕು ಅಲ್ಲಿ ಭಾಗಕಲಾವಿಕಲಾಪರೆ ಯೆಂದು ತಿಳಿದು ಯಥಾಸ್ಥಾನವಾಗಿ ಭುಜಕೋಟಿಗಳಿಗೆ ಕೂಡಲು ಭುಜಕೋಟಿಜ್ಯಾಸ್ಫುಟವಾಗುವದು ಕೋಟಿಫಲವಂ ಕೋಟಿಯುಲ್ಲೂ ಭುಜಾಫಲವನ್ನು ಭುಜೆಯುಲ್ಲೂ ಕೂಡಬೇಕೆಂದಭಿಪ್ರಾಯವು



ಅವ ॥ ಗ್ರಹಗಳಿಗೆ ಮಧ್ಯಛೇದಕವೂ ಸ್ಫುಟೀಕರಣವೂ.

ಮೂ॥ ಸೂರ್ಯಛೇದಸ್ಸ್ಯಾಜ್ಜಿನನೇತ್ರೈಶ್ಚಂದ್ರಸ್ಯಸಪ್ತಸಿಧಯಶ್ಚ ।
ಭೌಮಸ್ಯತರ್ಕವೇದಾಃಬಾಹುಜ್ಯಾರ್ಧೇನಶೋಧಿಕಾಶ್ಛೇದಾಃ ೧೦॥
ಬುಧಮಂದಛೇದಶ್ಶತಮಥಜೀವಸ್ಯತುಗಜೇಭಸಂಖ್ಯಾಚ ।
ಶುಕ್ರಸ್ಯಮಂದಕರ್ಮಣಿವಿಚ್ಛೇದೋಭವತಿಶೂನ್ಯಗಜನೇತ್ರೈಃ ೧೧॥
ಖರಕರತನಯಸ್ಯೈಹತುಸಂಛೇದಸ್ಸ್ಯಾತ್ತ್ರಿತರ್ಕಸಂಖ್ಯಾಚ ।
ರವ್ಯಾದೀನಾಂಮಧ್ಯಛೇದಾಸ್ತುಸ್ವಸ್ವಕೋಟಿದಳಪಿಯುತಾಃ॥ ೧೨॥
ಸಹಿತಾಃಕಟಕಮೃಗಾದಿಗತಕೇಂದ್ರಸ್ಫುಟಾಸ್ಸ್ಯುಮೇಛೇದಾಃ॥

ಟೀ ॥ ರವಿಗೆ ಮಧ್ಯಛೇದ ೨೧೪ ಚಂದ್ರನಿಗೆ ೯೭ ಕುಜನಿಗೆ ೪೬ ಬುಧನಿಗೆ ೧೦೦ ಗುರುವಿಗೆ ೮೮ ಶುಕ್ರನಿಗೆ ೨೮೦ ಶನಿಗೆ ೬೩ ಈಮಂದ ಛೇದಕವನ್ನು ಭುಜಜ್ಯಾರ್ಧದಲ್ಲಿ ಶೋಧಿಸುವದು. ಹೀಗೆ ಕೋಟಿಕಟಕಾದಿಕೇಂದ್ರವಾದರೆ ಕೋಟಿಯನ್ನು ಅರ್ಧಮಾಡಿ ಮಧ್ಯಛೇದದಲ್ಲಿ ಕಳಯುವದು ಮಕರಾದಿಕೇಂದ್ರವಾದರೆ ಕೋಟಿಯನ್ನು ಅರ್ಧಿಶಿ ಕೂಡುವದು ಹೀಗೆ ಛೇದ ಕಸ್ಫುಟವಾಗುವದು.

ಅವ ॥ ಭುಜಾಫಲ ಸಂಸ್ಕಾರವು.

ಮೂ॥ ಪ್ತಿಕೃತಾಭುಜಜ್ಯಾಛೇದೆನಾಪ್ತಂತುಮಧ್ಯಖಗೇ॥ ೧೩॥
ಕೇಂದ್ರೇಮೇಷತುಲಾದಿಗತೇಸತಿಯುತಮಯುತಮನ್ನಹಂಕಾರ್ಯಂ ।
ಛೇದಹೃತಂಫಲಮಖಿಲಗ್ರಹಭಾಗಾದಿಷ್ವನಾರತಂಕಾರ್ಯಂ॥ ೧೪॥

ಟೀ ॥ ಸ್ಫುಟಭುಜಜ್ಯಾಭಾಗವನ್ನು ೬೦ ರಿಂಗುಣಿಶಿ ಲಿಪ್ತೀಕರಿಶಿ ಸ್ಫುಟ ಛೇದದಿಂಭಾಗಿಶಿ ಬಂದ ಮಂದಫಲವನ್ನು ಮೇಷಾದಿಕೇಂದ್ರವಾದರೆ ಮಧ್ಯಗ್ರಹ ದಲ್ಲಿ ಕೂಡುವದು ತುಲಾದಿಕೇಂದ್ರವಾದರೆ ಕಳೆಯುವದು.

ಅವ ॥ ಅರ್ಕ ಬಾಹುಫಲ ಸಂಸ್ಕಾರವು.

ಮೂ॥ ರವಿಬಾಹುಫಲವಿನಿಘ್ನಾಃ ಗ್ರಹದಿನಗತಯಸ್ತುಚಕ್ರಲಿಪ್ತಾಭಿಃ ।
ವಿಹೃತಾಃ ಫಲಮರ್ಕವದ್ಋಣಧನಮನುದಿನಮಖಿಲಖೇಚರೇಷುಸ್ಯಾತ್॥

ಟೀ ॥ ಸೂರ್ಯ ಭುಜಾಫಲವನ್ನು ಲಿಪ್ತೀಕರಿಶಿ ಗ್ರಹ ಗತಿಗಳಿಂದ ಗುಣಿಶಿ ೨೧೬೦೦ ರಿಂದ ಭಾಗಿಶಿ ಬಂದ ಫ-ವನ್ನ ಸೂರ್ಯಕೇಂದ್ರಾನುಸಾರವಾಗಿ ಆಯಾಯ ಗ್ರಹಗಳಲ್ಲಿ ಧನ ಋಣ ಮಾಡುವದು ಹೀಗೆ ಮಧ್ಯಗತಿಇಂದ ಸಾಧಿಶಿದರೆ ಮಧ್ಯಗ್ರಹದಲ್ಲೂ ಸ್ಫುಟಗತಿಇಂದ ಸಾಧಿಶಿದರೆ ಸ್ಫುಟಗ್ರಹದಲ್ಲೂ ಸಂಸ್ಕರಿಸುವದು.

ಉದಾಹರಣಂ ರವಿಸ್ಫುಟಕ್ಕೆ.

ದೇಶಾಂತರಫಲ ಸಂಸ್ಕೃತ ಮಧ್ಯ ರವಿ: ೦-೧೬-೫೫-೫೫ ರವಿ ಮಂದೋಚ್ಚ ೨-೧೮-೨೪-೩೭ ಮಂದಕೇಂದ್ರ ೨-೧-೨೮-೪೨ ಇದೇ ಭುಜ ಇದನ್ನ ೩ ರಾಶಿಇಂದ ಕಳೆಯಲು ೦-೨೮-೩೧-೧೮ ಇದೇ ಕೋಟಿಭುಜಜ್ಯೆ ೭-೧೨-೫೨ ಮಕರಾದಿಕೇಂದ್ರವಾದ್ದರಿಂದ ಧನಕೋಟಿಜ್ಯೆ ೩-೫೨ ಮಂದಛೇದ ೨೪ ಕೋಟಿ ಜ್ಯಾರ್ಧ ಸಂಸ್ಕೃತ ಮಂದಛೇದ ೨೫-೫೬ ದಿಂಡ ಭುಜಜ್ಯೆಯಾದ ೭-೧೨-೫೨ ರನ್ನ ಭಾಗಿಶಿದ ಭಾಗಾದಿಫಲ ೧-೨೫-೪೫ ವನ್ನು ಸಂಸ್ಕೃತವಾಸ್ಫುಟ ರವಿ ೦-೧೮-೨೧-೪೦.

ಚಂದ್ರಸ್ಫುಟ.

ದೇಶಾನ್ತರ ಸಂಸ್ಕೃತ ಚಂದ್ರ ೬-೧೬-೫೪-೧೫ ರವಿ ಭುಜಾಫಲ ೮೫-೪೫ ಚಂದ್ರ ಮಧ್ಯಗತಿಯಿಂದ ಗುಣಿಶಿ ೨೧೬೦೦ ರಿಂದ ಭಾಗಿಶಿ ಬಂದಕಲಾದಿಫಲ ೩-೯ ಸಂಸ್ಕೃತ ಚಂದ್ರ ೬-೧೬-೫೭-೨೪ ಚಂದ್ರೋಚ್ಚ ೫-೨೨-೪೪-೩೦ ಕೇಂದ್ರ ೧೧-೫-೪೭-೬ ರಾಶಿಯಲ್ಲಿ ೯ ಕಳೆದ ಕೋಟಿ ೨-೫-೪೭-೬ ಕೇಂದ್ರವಂ ೧೨ ರಿಂದ ಶೋಧಿಶಿದ ಋಣ ಭುಜ ೦-೨೪-೧೨-೫೪ ಋಣ ಭುಜಜ್ಯೆ ೩-೧೯-೨೫ ಧನಕೋಟಿಜ್ಯೆ ೭-೨೮ ಚಂದ್ರ ಮಂದಛೇದ ೯೭ ಕೋಟಿಜ್ಯಾರ್ಧ ೩-೪೪ ಸಂಸ್ಕೃತ ಸ್ಫುಟಛೇದ ೧೦೦-೪೪ ದಿಂದ ಭುಜಜ್ಯೆಯನ್ನು ಭಾಗಿಶಿ ಬಂದ ಭಾಗಾದಿ ಮಂದಫಲ ೧-೫೮-೪೬ ಸಂಸ್ಕೃತ ಸ್ಫುಟ ಚಂದ್ರ ೬-೧೪-೫೮-೩೮.

ಕುಜಸ್ಫುಟ.

ಕುಜ ಮಧ್ಯ ೧-೨೮-೪೫-೩೫ ಕುಜ ಮಂದೋಚ್ಚ ೪ ೧೦-೨-೪೬

ಮಂದಕೇಂದ್ರ ೨-೧೧-೧೬-೧೧ ಇದ ೩ ರಾಶಿಯಲ್ಲಿ ಕಳದ ಕೋಟಿ ೦-೧೮-೪೩-೪೯ ಧನ ಭುಜಜ್ಯೆ ೭-೪೪-೧೩ ಧನ ಕೋಟಿಜ್ಯೆ ೨-೩೫-೪೩ ಭುಜಜ್ಯಾರ್ಧದಲ್ಲಿ ಶೋಧಿಶಿದ ಮಂದಫೇದ ೪೨-೮ ಕೋಟಿಜ್ಯಾರ್ಧ ಸಂಸ್ಕೃತ ಮಂದಫೇದ ೪೩-೨೬ ದಿಂದ ಭುಜಜ್ಯೆಯನ್ನು ಭಾಗಿಶಿ ಬಂದಮಂದಫಲ ಭಾಗಾದಿ ೧೦-೪೧-೨೦ ಸಂಸ್ಕೃತ ಸ್ಫುಟ ಕುಜ ೨-೯-೨೬-೫೭

## ಬುಧಸ್ಫುಟ.

ರವಿ ಬಾಹುಫಲ ಸಂಸ್ಕೃತ ಮಧ್ಯ ರವಿ ೦-೧೬-೫೯-೯ ಬುಧ ಮಂದೋಚ್ಚ ೭-೧೦-೨೮-೨೨ ಮಂದಕೇಂದ್ರ ೬-೨೩-೩೨-೧೩ ರಾಶಿ ೬ಕ್ಕೆ ಅಧಿಕವಾಗಿ ಭಾಗಾದಿಗಳು ಕಾಣುವದರಿಂದ ೬ ರಾಶಿಯನ್ನು ಕಳದದ್ದು ರುಣ ಭುಜ ೦-೨೩-೩೨-೧೩ ರುಣ ಕೋಟಿಜ್ಯೆ ೨-೬-೨೭-೪೭ ಭುಜಜ್ಯೆ ೩-೧೩-೪೮ ಕೋಟಿಜ್ಯೆ ೭-೩೦ ಕೋಟಿಜ್ಯಾರ್ಧ ಸಂಸ್ಕೃತ ಮಂದಫೇದ ೯೬-೧೫ ದಿಂದ ಭುಜಜ್ಯೆಯನ್ನು ಭಾಗಿಶಿ ಬಂದ ಭಾಗಾದಿ ಮಂದಫಲ ೨-೦-೨೧ ಸಂಸ್ಕೃತ ಮಂದಸ್ಫುಟ ಬುಧ: ೦-೧೪-೫೫-೪೮.

## ಗುರುಸ್ಫುಟ.

ರವಿ ಬಾಹುಫಲ ಸಂಸ್ಕೃತ ಗುರುಮಧ್ಯ ೫-೨-೭-೨೯ ಗುರು ಮಂದೋಚ್ಚ ೫-೨೨-೨೯-೬ ಕೇಂದ್ರ ೦-೨೦-೨೧-೩೭. ಇದೆಭುಜ ಧನಕೋಟಿ ೨-೯-೨೮-೨೩ ಧನಭುಜಜ್ಯೆ ೨-೪೯-೬ ಕೋಟಿಜ್ಯೆ ೭-೪೦ ಕೋಟಿಜ್ಯಾರ್ಧ ಸಂಸ್ಕೃತ ಮಂದಫೇದ ೯೧-೫೦ ದಿಂದ ಭುಜಜ್ಯೆಯನ್ನು ಭಾಗಿಶಿ ಬಂದ ಭಾಗಾದಿ ಮಂದಫಲ ೧-೫೦-೨೮ ಸಂಸ್ಕೃತ ಮಂದಸ್ಫುಟ ಗುರು ೫-೩-೫೭-೫೭.

## ಶುಕ್ರಸ್ಫುಟ.

ರವಿ ಭುಜಾಫಲ ಸಂಸ್ಕೃತ ಮಧ್ಯ ರವಿ ೦-೧೬-೫೬-೯ ಶುಕ್ರ ಮಂದೋಚ್ಚ ೨-೧೯-೫೩-೧೨ ಕೇಂದ್ರವೆ ಧನಭುಜ ೨-೨-೫೭-೩ ಧನಕೋಟಿ ೦-೨೭-೨-೫೭ ಭುಜಜ್ಯೆ ೭-೧೮-೨೪ ಕೋಟಿಜ್ಯೆ ೩-೪೧ ಕೋಟಿಜ್ಯಾರ್ಧ ಸಂಸ್ಕೃತ ಮಂದಫೇದ ೨೮೧-೫೧ ದಿಂದ ಭುಜಜ್ಯೆಯನ್ನು ಭಾಗಿಶಿ ಬಂಧಭಾಗಾದಿ ಮಂದಫಲ ೧-೩೩-೧೫ ಸಂಸ್ಕೃತ ಶುಕ್ರ ಮಂದಸ್ಫುಟ ೦-೨೦ ೨೯-೨೪.

## ಶನಿಸ್ಫುಟ.

ರವಿಭುಜಾಫಲ ಸಂಸ್ಕೃತ ಶನಿಮಧ್ಯ ೯-೨೦-೧೨-೦ ಶಸಿಮಂದೋಚ್ಚ ೮-೨-೧೯-೨೭ ಮಂದಕೇಂದ್ರ ೧೦-೧೨-೭-೨೭ ರಾಶಿಯಲ್ಲಿ ೯ ಕಳದ ಕೋಟಿ ೧-೧೨-೭-೨೭ ರಾಶಿ ೧೨ ರಿಂದ ಶೋಧಿಶಿದ ರುಣ ಭುಜ ೧-೧೭-೫೨-೩೩ ಭುಜಜ್ಯೆ ೬-೦-೧೫ ಕೋಟಿಜ್ಯೆ ೫-೨೫ ಕೋಟಿಜ್ಯಾರ್ಧ ಸಂಸ್ಕೃತ ಮಂದಫೇದ

೬೫-೪೭ ದಿಂದ ಭುಜಜ್ಯೆಯನ್ನು ಭಾಗಿಶಿ ಬಂದ ಭಾಗಾದಿ ಮಂದಫಲ ೫-೨೮-೪೭ ಸಂಸ್ಕೃತ ಮಂದಸ್ಫುಟ ಶನಿ ೯-೧೪-೪೩-೩೩.

ಅವ|| ಗ್ರಹಮಧ್ಯಗತಿಯನ್ನು ಸ್ಫುಟೋಪಾಯವು

ಮೂ|| ಕೋಟಿಜ್ಯಯಾವಿನಿಘ್ನಾ ಕೇಂದ್ರಗತಿಶ್ಛೇದಸಂವಿಭಕ್ತಫಲಂ ।
ಕೇಂದ್ರೇಕರ್ಕಿಮೃಗಾದೌಯುತವಿಯುತಸ್ಪಷ್ಟಭುಕ್ತಿರೇವಯಂ||

ಟೀ|| ಗ್ರಹಮಧ್ಯ ಗತಿಯನ್ನ ಕೋಟಿಜ್ಯಾವಿನಿಂದಾಗುಣಿಶಿ ಸ್ಫುಟಛೇದ ದಿಂದ ಭಾಗಿಶಿ ಬಂದ ಫಲವು ಕೇಂದ್ರ ಕಟಕಾದಿಯಾದ ಗ್ರಹ ಮಧ್ಯಗತಿಯಲ್ಲಿ ಕೂಡುವದು ಕೇಂದ್ರ ಮಕರಾದಿ ಯಾದರೆ ಕಳಿಯುವದು ಮಂದಸ್ಫುಟ ಗತಿ ಯಾಗುವದು.

ಉ ದಾ ಹ ರ ಣ.

ರವಿ ಮಧ್ಯಗತಿ ೫೯-೮ನ್ನ ಕೋಟಿಜ್ಯೆ ೩-೫೨ ಇಂದ ಗುಣಿಶಿ ಮಂದಛೇದ ೨೫೫-೫೬ ದಿಂದ ಭಾಗಿಶಿ ಬಂದ ಕಲಾದಿಫಲ ೧-೦ ಕೇಂದ್ರ ಮಕರಾದಿ ಯಾದ ಕಾರಣ ರವಿಮಧ್ಯ ಗತಿ ೫೯-೮ ರಲ್ಲಿ ಕಳದದ್ದು ೫೮-೮ ರ ಸ್ಫುಟ ಗತಿಯಾಯಿತು. ಚಂದ್ರಗತಿಯನ್ನು ಹೀಗೆಯೇ ಗುಣಿಶಿಬಂದ ಫಲ ೫೮-೬ ಮಕರಾದಿ ಕೇಂದ್ರವಾದ್ದರಿಂದ ಮಧ್ಯಗತಿಯಲ್ಲಿ ಕಳದ ಶೇಷವೇ ಚಂದ್ರ ಸ್ಫುಟಗತಿ ೭೩೨-೨೯ ಹೀಗೆಯೇ ಸಂಪಾದಿಶಿದ ಮಕರಾದಿ ಕುಜ ಗತಿ ೨೯-೩೪ ಹೀಗೆಯೇ ಸಂಪಾದಿಶಿದ ಕಟಕಾದಿ ಬುಧ ಗತಿ ೬೩-೪೪ ಮಕರಾದಿ ಗುರುಗತಿ ೪-೩೫ ಮಕರಾದಿ ಶುಕ್ರಗತಿ ೫೮-೨೨ ಮಕರಾದಿ ಶನಿ ಮಂದಸ್ಫುಟಗತಿ ೧-೫೩.

ಇಲ್ಲಿ ರವಿ ಮಧ್ಯವೇ ಬುಧ ಶುಕ್ರರಿಗು ಮಧ್ಯವು ರವಿಗತಿಯೇ ಬುಧ ಶುಕ್ರರಿಗು ಮಧ್ಯಗತಿಯೆಂದಭಿಪ್ರಾಯವು.

ಅವ|| ಅಯನಾಂಶ ಸಾಧನೋಪಾಯವು.

ಮೂ|| ಖನಖಗಿರಿಭಕ್ತಕಲಿಗತವರ್ಷೈರಯನಗ್ರಹೋತ್ರಭಗಣಾದಿ ।
ತದ್ಭುಜರಾಶಿಪ್ರಾದ್ಯಂಪೂರ್ಣ್ಣಮಧೋಮಧ್ಯಮಂದಶಾಂಶೋನಂ||೧೭||
ಭಾಗಾತ್ಮಕಂತೃತೀಯಂಸ್ವಪಂಚಮಾಂಶೋನಮಪಿಮಿಳಿತ್ವಾತ್ರ ।
ವಿಭಜೇತ್ತ್ರಿಭಿಸ್ತುಶುದ್ಧಂಭಾಗಾದಿಕಮಯನಮೇಷಸಿದ್ಧಾನ್ತಃ|| ೧೮||

ಟೀ|| ಗತ ಕಲ್ಯಬ್ದವನ್ನು ೭೨೦೦ ರಿಂದ ಭಾಗಿಶಿದ (ಭಗಣಾದಿಅಯನಗ್ರಹವಾಗುವದು) ಫಲ ಭಗಣವಾಗುವದು ಶೇಷವನ್ನು ೧೨ ರಿಂದ ಗುಣಿಶಿಯಥಾನ್ಯಾಯವಾಗಿ ರಾಶ್ಯಾದಿಯನ್ನು ಸಂಪಾದಿಶಿ ಭುಜೆಯನ್ನುಮಾಡಿ ರಾಶಿಯಲ್ಲಿ ೧

ಇದ್ದರೆ ೩೦ ಭಾಗವನ್ನಾಗಿ ತಿಳಿಯುವದು ೨ ರಾಶಿ ಇದ್ದರೆ ಪ್ರಥಮ ರಾಶಿ ಪಿಂಡವಾದ ೩೦ ರಲ್ಲಿ ೧೦ನೆ ಭಾಗವಾದ ೩ ಕಳದು ೩೦ ರಲ್ಲಿ ಕೂಡುವದು, ರಾಶಿ ೨ಕ್ಕೆ ಅಧಿಕವಾದಾಗ ತೃತೀಯರಾಶಿ ಪುಂಜವಾದ ೯೦ ರಲ್ಲಿ ೫ನೆ ಅಂಶವಾದ ೧೮ ಕಳದು ಶೇಷವಾದ ೭೨ ರಲ್ಲಿ ೫೭ನ್ನ ಕೂಡುವದು, ಈ ಪಿಂಡವನ್ನು ೩ ರಿಂದ ಭಾಗಿಸಲು ಭಾಗಾದಿ ಅಯನಾಂಶವಾಗುವದು.

ಉ ದಾ ಹ ರ ಣ

ವರ್ತಮಾನಭಾವ ಸಂವತ್ಸರಕ್ಕೆ ಗತಕಲ್ಯಬ್ದ ೪೯೯೫ನ್ನ ೭೨೦೦ ರಿಂದ ಭಾಗಿಸಲು ಲಬ್ಧಂ ಶೇಷವನ್ನು ೧೨ ರಿಂದ ಗುಣಿಶಿ ೭೨೦೦ ರಿಂದ ಬಂದ ಫಲವು ರಾಶಿ ಹೀಗೆ ಭಾಗಾದಿ ಸಂಪಾದಿಶಿದ್ದ ೮-೮-೪೫-೦ ಭುಜ ೨-೮-೪೫-೦ ತೃತೀಯ ರಾಶಿ ಪುಂಜ ೮೧-೪೫ ಪಂಚಮಾಂಶ ೧೬ ಕಳಿಯಲು ೬೪ ಇದನ್ನ ೩ ರಿಂದಭಾಗಿಸಲು ೨೧ ಶೇಷವನ್ನು ೬೦ರಿಂದ ಗುಣಿಸಲು ೬೦ ಪುನಹಾ ೩ರಿಂದ ಭಾಗಿಸಲು ಲಿಪ್ತಿ ೨೦ ಶೇಷವಿಲ್ಲವಾಗಿ ಬಂದ ಲಬ್ಧವೇ ಭಾಗಾದಿ ಅಯನಾಂಶವು ೨೧-೨೦-೦.

ಅವ॥ ಚರಸಾಧನವು.

ಮೂ॥ ತ್ರಿಸ್ಥಪಕ್ಷಭಾವಿನಿಹತಾವಿಂಶತಿಭಿರ್ನ್ಗ್ರಪವರ್ಗೈಶ್ಚಗಗನಕರ್ಣೈಃ ।
ಅಂತ್ಯಾಗುಣಾಸಂಭಕಾತ್ತಯುದಿತಾಸ್ಸ್ಯುಶ್ಚರಃ ನಾಡಿಕಾಸ್ಸ್ವತತ್ರಂ॥ ೯॥

ಟೀ॥ ಸ್ವದೇಶ ವಿಷುವಭಾಯೆ ಯನ್ನು ಮೂರು ಸ್ಥಳದಲ್ಲಿ ಇಟ್ಟು ಕ್ರಮವಾಗಿ ಮೊದಲನೆದನ್ನ ೨೦ ರಿಂದಲು ಇನ್ನೊಂದನ್ನ ೧೬ ರಿಂದಲು ಮತ್ತೊಂದನ್ನ ೨೦ ರಿಂದಲು ಗುಣಿಶಿದ್ದೆ ಆದಿಮಧ್ಯ ಅಂತ್ಯಚರ ವಿಘಳಿಗೆಗಳಾಗುವದು ಅಂತ್ಯಚರವಿಘಳಿಗೆಮಾತ್ರ ೩ ರಿಂದ ಭಾಗಿಶಿಮಿಕ್ಕದ್ದೇ ಅಂತ್ಯಚರ ವಿಘಳಿಗೆ ಯಾಗುವದು.

ಉ ದಾ ಹ ರ ಣ.

ಕುಂಡಿನೀನಗರಕ್ಕೆ ವಿಷುವಭಾಯಾಂಗುಳ ೩-೩೬ವನ್ನ ೨೦ ರಿಂದ ಗುಣಿಸಲು ೭೨ ಇದೆ ಆದಿಚರ ೧೬ ರಿಂದ ಗುಣಿಸಲು ೫೭-೩೬ ಮಧ್ಯಚರವು ಆದಿಚರವಾದ ೭೨ ರನ್ನ ೩ ರಿಂದ ಭಾಗಿಸಲು ೨೪ ಇದೆ ಅಂತ್ಯಚರವು ಇದರಿಂದಲು ಆಹಃಪ್ರಮಾಣಸಾಧನ.

## ಅಥ॥ ದಿನಾರ್ಧಸಾಧನೋಪಾಯವು

ಮೂ॥ ಅಯನಾಂಶಸಹಿತಸೂರ್ಯೋದಿತಭುಜರಾಶೇಃ ಪ್ರಮಿತಖಂಡಾನಾಂ ।
ಸಂಯೋಗೋಭಾಗಾದೇರೇಷ್ಯಹತಾದ್ಗಗನರಾಮಭಕ್ತಾಚ್ಚ ॥ ೨೦ ॥
ಫಲಸಹಿತಷ್ಷಷ್ಟಿಹೃತಶ್ಚರನಾಡ್ಯರ್ಧಂ ಹಿ ಪಂಚದಶಕೈರೂನಂ ।
ಯೋಜ್ಯಂ ಸಾಯನಸೂರ್ಯಾದ್ಧಟಮೇಷಾದಿಸ್ಥಿತೇ ಚ ದಿನದಳತಃ ॥

ಟೀ॥ ಅಯನಾಂಶಸಹಿತ ಸೂರ್ಯನ ಭುಜಮಾಡಿ ಭುಜರಾಶಿಸ್ಥಾನ ಶೂನ್ಯ ವಿದ್ದರೆ ಭಾಗಾದಿಯನ್ನು ಆದಿಚರದಿಂದಲು ರಾಶಿಸ್ಥಾನದಲ್ಲಿ ೧ ಇದ್ದರೆ ಆದಿಚರ ವನ್ನು ರಾಶಿಯಲ್ಲಿಟ್ಟು ಭಾಗಾದಿಯನ್ನು ಮಧ್ಯಚರದಿಂದಲೂ ರಾಶಿಸ್ಥಾನದಲ್ಲಿ ೨ ಇದ್ದರೆ ಆದಿಮಧ್ಯ ಚರೈಕ್ಯಮಾಡಿ ರಾಶಿಯಲ್ಲಿಟ್ಟು ಭಾಗಾದಿಯನ್ನು ಅಂತ್ಯಚ ರದಿಂದಲು ಗುಣಿಶಿ ಯಥಾವಿಧಿಯಾಗಿ ಭಾಗಕ್ಕೆ ತಂದು ಭಾಗಸ್ಥಾನವನ್ನು ೩೦ ರಿಂದ ಭಾಗಿಶಿದ್ದು ರಾಶಿಸ್ಥಾನವು ಅಪೇಕ್ಷಿತ ವಿಘಳಿಗೆಗಳು ಇದನ್ನು ೬೦ ರಿಂದ ಭಾಗಿಶಿದ್ದು ಘಳಿಗೆ ಶೇಷವೇ ವಿಘಳಿಗೆಗಳು ಈಚರ ವಿಘಳಿಗೆಗಳ ಅರ್ಧವನ್ನು ದಿನಾರ್ಧವಾದ ೧೫ ರಲ್ಲಿ ಸಾಯನರವಿ ಮೇಷಾದಿಯಲ್ಲಿದ್ದರೆ ಕೂಡುವದು, ತುಲಾ ದಿಯಾದರೆ ಕಳೆಯುವದು, ಈ ದಿನಾರ್ಧವನ್ನು ದ್ವಿಗುಣಿಶಿದರೆ ಅಹಃಪ್ರಮಾಣ ವಾ ಗುವದು, ಇದನ್ನು ೬೦ ರಲ್ಲಿ ಕಳೆಯಲು ರಾತ್ರಿ ಪ್ರಮಾಣವಾಗುವದು, ಸಾವನ ಸೌರಗಳಿಗೆ ೬೦-೧೦ ದಿನ ಪ್ರಮಾಣವಾಗುವದು ಆಗ ದಿನಾರ್ಧವ ೧೫- ೨॥ ಘ ಳಿಗೆಗಳಿಗೆ ಚರಾರ್ಧಘಳಿಗೆ ಸೇರಿಸಬೇಕೆಂದಭಿಪ್ರಾಯವು.

### ಉ ದಾ ಹ ರ ಣೆ.

ಸ್ಫುಟರವಿ ೦-೧೮-೨೧-೪೦ ಅಯನಾಂಶ ೨೧-೨೦-೦ ಸಾಯನರವಿ ೧-೯-೪೧-೪೦ ಇದೇ ಭುಜರಾಶಿಸ್ಥಾನ ೧ ಇದ್ದರಿಂದ ಆದಿಚರ ೭೨ ಭಾಗಾದಿಯನ್ನು ಮಧ್ಯಚರವಾದ ೫೭ ರಿಂದ ಗುಣಿಶಿದ್ದು ೫೧೩ ಭಾಗ ೨೩೩೭ ಲಿಪ್ತಿಯು ೨೨೮೦ ವಿಲಿಪ್ತಿ ಇದನ್ನು ಯಥಾವಿಧಿಯಾಗಿ ರಾಶಿಸ್ಥಾನಕ್ಕೆ ಸಂಗ್ರಹಿಸಲಾಗಿ ೧.೮ ಚರದ ಘಳಿಗೆ ಯಾಯಿತು ಇದನ್ನು ಅರ್ಧಮಾಡಿ ಮೇಷಾದಿಕೇಂದ್ರವಾದ್ದರಿಂದಾ ಅಹ ರರ್ಧವಾದ ೧೫-೦ ರಲ್ಲಿ ಕೂಡಲು ೧೫-೯ ಅಹರರ್ಧ ಪ್ರಮಾಣವಾಯಿತು ದ್ವಿಗು ಣಿಶಿದ ಅಹರರ್ಧವೇ ಅಹಃಪ್ರಮಾಣ ೩೦-೧೮ ಅಹಸ್ಸನ್ನು ೬೦-೧೦ ರಲ್ಲಿ ಕಳೆಯಲು ೨೯-೫೨ ರಾತ್ರಿ ಪ್ರಮಾಣವಾಯಿತು.

ಅಥ॥ ಪಂಚಾಂಗವೆಂಬ ತಿಥಿನಕ್ಷತ್ರಯೋಗಕರಣಾಸಾಧನವು.

ಮೂ॥ ಮಾಂದ್ಯೈಕಕರ್ಮಸಂಸ್ಕೃತಚಂದ್ರಾರ್ಕಾತ್ತಿಥಿಭಯೋಗಕರಣಾನಾಂ।
ಯೋಗ್ಯಾಸ್ಸ್ಯಾತಾಂಗ್ರಹಣೇಚಂದ್ರೋಸ್ಯೈರ್ಸ್ಸಂಸ್ಕೃತೌಗ್ರಾಹ್ಯ॥
ವ್ಯರ್ಕೇಂದುಮಂದಸುಶುದ್ಧೇಂದುಕಲಾ ಖದ್ವ್ಯದ್ರಿಕೃತ್ಫಲಾದ್ಯಾತಾ।
ತಿಥಯಸ್ಸ್ಯುರ್ಗತಗಮ್ಯಾತ್ತಲ್ಲಿಪ್ತಾಷಷ್ಟಿತಾಡಿತಾಸ್ಸತ್ಯ ॥ ೬೩ ॥
ವ್ಯರ್ಕೇಂದುಗತಿವಿಭಕ್ತಾತ್ತಿಥಿನಾಡ್ಯಶ್ಶೇಷತೋವಿನಾಡ್ಯಸ್ಸ್ಯುಃ।
ಚಂದ್ರಕಲಾಃಖಖನಾಗೈರ್ಭಕ್ತಾಲ್ಲಬ್ಧಂಭವೇದ್ಗತಾತಾರಾ॥ ೬೪॥
ತಚ್ಛೇಷಂಷಷ್ಟಿಹತಂಯಾತ್ಸ್ಯಾದ್ಭುಕ್ತಿಭಕ್ತಮಿಹನಾಡ್ಯಃ।
ರವಿಶಶಿಯೋಗಾದೇವಂಯೋಗಸ್ಸ್ಯಾದ್ಯೋಗತಾಚ್ಚಗಮ್ಯಾಚ್ಚ॥ ೬೫॥
ವ್ಯರ್ಕೇಂದೋರ್ಲಿಪ್ತಾಸ್ತಾ ಪುಷ್ಕರರಸವಹ್ನಿಭಾಜಿತಾತ್ಪ್ರಾಪ್ತಂ।
ಫಲಮೇಕೋನಂಗಿರಿಹೃತಮವಶಿಷ್ಟಂಬವಮುಖಾದಿಚರಕರಣಂ॥೬೬

ಟೀ॥ ಮಾಂದಕರ್ಮಮಾತ್ರ ಮಾಡಿದ ಚಂದ್ರ ಸೂರ್ಯರಿಂದ ತಿಥ್ಯಾದಿ ಸಾಧನ ಮಾಡಬೇಕು, ಹೀಗೆ ಮಾಡಿದ ತಿಥಿಯೇ ಶ್ರಾದ್ಧಾದಿಗಳಿಗೆ ಗ್ರಾಹ್ಯವು ಗ್ರಹಣಾದಿಗಳಿಗೆ ಮಾತ್ರಾದೃಕ್ಸಂಸ್ಕಾರಾದಿ ಇತರ ಸಂಸ್ಕಾರಗಳನ್ನು ಮಾಡಬೇಕು, ಮಂದಕರ್ಮಮಾತ್ರದಿಂದ ಶುದ್ಧವಾದ ಚಂದ್ರಸ್ಫುಟದಲ್ಲಿ ಸೂರ್ಯಸ್ಫುಟವನ್ನು ಕಳದರೆ, ವ್ಯರ್ಕೇಂದುವಾಯಿತು ಚಂದ್ರಸ್ಫುಟಗತಿಯ ಸೂರ್ಯಗತಿ ಕಳಯಲು ವ್ಯರ್ಕೇಂದುಗತಿಯಾಯಿತು ಈ ವ್ಯರ್ಕೇಂದುವನ್ನು ಲಿಪ್ತೀಕರಿಶಿ ೭೨೦ ರಿಂದ ಭಾಗಿಶಿದ ಲಬ್ಧವೇ ಶುಕ್ಲ ಪಾಡ್ಯಮಿ ಮೊದಲಾಗತತಿಥಿ ಸಂಖ್ಯೆಯನ್ನು ಹೇಳುವದು ಶೇಷವನ್ನು ೭೨೦ ರಲ್ಲಿ ಕಳದು ೬೦ ರಿಂದಗುಣಿಶಿ ವ್ಯರ್ಕೇಂದು ಗತಿಯಿಂದ ಭಾಗಿಶಿದ್ದು ಘಳಗೆ ಶೇಷದಿ, ಹೀಗೆ ವಿಘಳಗೆ ಸಾಧಿಸುವದು, ಸ್ಫುಟಚಂದ್ರನನ್ನು ಲಿಪ್ತೀಕರಿಶಿ ೮೦೦ ರಿಂದ ಭಾಗಿಸಲು ಅಶ್ವಿನ್ಯಾದಿಗತ ನಕ್ಷತ್ರ ಸಂಖ್ಯೆ ಯಾಗುವದು ಶೇಷವನ್ನು ೮೦೦ ರಿಂದ ಕಳದು ೬೦ ರಿಂದ ಗುಣಿಶಿ ಚಂದ್ರಗತಿಯಿಂದಭಾಗಿಶಿ ಘಳಗೆ ವಿಘಳಗೆ ಸಾಧಿಸುವದು, ರವಿ ಚಂದ್ರಸ್ಫುಟಯೋಗಮಾಡಿ ಲಿಪ್ತೀ ಕರಿಶಿ ೮೦೦ ರಿಂದ ನಕ್ಷತ್ರದಂತೆಯೇ ರವಿ ಚಂದ್ರಗತಿ ಯೋಗಮಾಡಿ ಘಳಗೆ ವಿಘಳಗೆ ಸಾಧಿಸುವದು, ಪೂರ್ವೋಕ್ತ ವ್ಯರ್ಕೇಂದು ವನ್ನು ಲಿಪ್ತೀ ಕರಿಶಿ ೩೬೦ ರಿಂದ ಭಾಗಿಶಿಬಂದ ಲಬ್ಧದಲ್ಲಿ ೧ ಕಳದು ಪುನಹಾ ೭ ರಿಂದ ಭಾಗಿಶಿದ ಶೇಷವೇ ಬವಾದಿಚರಕರಣವಾದ ೭ ಕರಣ ಸಂಖ್ಯೆ ಯಾಗುವದು ತಿಥಿ ಘಳಗೆಯಲ್ಲಿ ಅರ್ಧವೆ ಕರಣವು ೧ ತಿಥಿಗೆ ೨ ಕರಣನ್ಯಾಯವಾಗಿ ತಿಥಿಘಳಗೆಯಲ್ಲಿ ಅರ್ಧವಾಗಿ ತಿಳಿಯುವದು, ಕೃಷ್ಣ ಚತುರ್ದಶಿ ಪ್ರಭೃತಿ ಶಕುನ್ಯಾದಿ ಸ್ಥಿರಕರಣವೆಂತಲೂ ತಿಳಿಯಬೇಕು.

| | ಶುಕ್ಲಪಕ್ಷ. | | | ಕೃಷ್ಣಪಕ್ಷ. | |
|---|---|---|---|---|---|
| | ಪೂರ್ವಾರ್ಧ | ಉತ್ತರಾರ್ಧ | | ಪೂರ್ವಾರ್ಧ | ಉತ್ತರಾರ್ಧ |
| ಪ್ರಥ | ಕಿಂತುಘ್ನ | ಬವ | ಪ್ರಥ | ಬಾಲವ | ಕೌಲವ |
| ದ್ವಿತೀ | ಬಾಲವ | ಕೌಲವ | ದ್ವಿತೀ | ತೈತುಲ | ಗರಜ |
| ತೃತೀ | ತೈತುಲ | ಗರಜ | ತೃತೀ | ವನಜ | ಭದ್ರ |
| ಚತು | ವನಜ | ಭದ್ರ | ಚತು | ಬವ | ಬಾಲವ |
| ಪಂಚ | ಬವ | ಬಾಲವ | ಪಂಚ | ಕೌಲವ | ತೈತುಲ |
| ಷಷ್ಠಿ | ಕಾಲವ | ತೈತುಲ | ಷಷ್ಠಿ | ಗರಜ | ವನಜ |
| ಸಪ್ತ | ಗರಜ | ವನಜ | ಸಪ್ತ | ಭದ್ರ | ಬವ |
| ಅಷ್ಟ | ಭದ್ರ | ಬವ | ಅಷ್ಟ | ಬಾಲವ | ಕೌಲವ |
| ನವ | ಬಾಲವ | ಕೌಲವ | ನವ | ತೈತುಲ | ಗರಜ |
| ದಶ | ತೈತುಲ | ಗರಜ | ದಶ | ವನಜ | ಭದ್ರ |
| ಏಕಾ | ವನಜ | ಭದ್ರ | ಏಕಾ | ಬವ | ಬಾಲವ |
| ದ್ವಾದ | ಬವ | ಬಾಲವ | ದ್ವಾದ | ಕೌಲವ | ತೈತುಲ |
| ತ್ರಯೊ | ಕೌಲವ | ತೈತುಲ | ತ್ರಯೊ | ಗರಜ | ವನಜ |
| ಚತುರ್ದ | ಗರಜ | ವನಜ | ಚತುರ್ಧ | ಭದ್ರ | ಶಕುನಿ |
| ಪೂರ್ಣಿ | ಬದ್ರ | ಬವ | ಅಮಾ | ಚತುಷ್ಪಾತ್ | ನಾಗವಾನ್ |

## ಉ ದಾ ಹ ರ ಣ.

ಸ್ಫುಟ ಚಂದ್ರನಲ್ಲಿ ಸ್ಫುಟ ಸೂರ್ಯನನ್ನು ಕಳದ ವ್ಯರ್ಕೆಂದು ೫-೨೬-೩೬-೫೮ ವ್ಯರ್ಕೆಂದು ಗತಿ ೬೭೪-೨೧ ಸವರ್ಣಮಾಡಿದ್ದು ಲಿಪ್ತಿಯನ್ನು ೬೦ ರಿಂದ ಗುಣಿಸಿ ವಿಲಿಪ್ತಿಯನ್ನು ಶೇರಿಸಲು ಗತಿ ೪೦೪೬೧ ವ್ಯರ್ಕೆಂದುರಾಶಿ ೩೦ ರಿಂದ ಗುಣಿಸಿದ್ದು ೧೫೦ ಭಾಗ ೨೬ನ್ನು ಶೇರಿಸಲು ೧೭೬ನ್ನು ೬೦ ರಿಂದ ಗುಣಿಸಿ ೧೦೫೬೦ ಲಿಪ್ತಿ ೩೬ ಶೇರಿಸಲು ವ್ಯರ್ಕೆಂದು ಲಿಪ್ತಿಯಾಯಿತು ೧೦೫೯೬ ಇದನ್ನು ೭೨೦ ರಿಂದ ಭಾಗಿಸಿದ ಲಬ್ಧ ೧೪ ಈ ಸಂಖ್ಯೆ ಶುಕ್ಲ ಚತುರ್ದಶಿ ಕಳದು ಪೂರ್ಣಿಮಾ ಭವಿಷ್ಯದೆಂದು ತಿಳಿಯುವದು, ಶೇಷ ೫೧೬-೫೮ನ್ನು ೭೨೦ ಲಿಪ್ತಿಯಲ್ಲಿ ಕಳದ ಶೇಷ ೨೦೩-೨ ಇದು ಸವರ್ಣಿಸಲು (೨೦೩ನ್ನ ೬೦ ರಿಂದ ಗುಣಿಸಿ ೨ ವಿಲಿಪ್ತಿಯನ್ನುಕೂಡಲು) ೧೨೧೮೨ ಇದನ್ನ ೬೦ ರಿಂದ ಗುಣಿಸಿ ವ್ಯರ್ಕೆಂದು ಸವರ್ಣ ಗತಿಯಿಂದ ಭಾಗಿಸಿದ ಲಬ್ಧ ಘಟಿಗೆ ೧೮ ಶೇಷವನ್ನು ೬೦ ರಿಂದ ಗುಣಿಸಿ ವ್ಯರ್ಕೆಂದು ಗತಿಯಿಂದ ಭಾಗಿಸಿದ ಲಬ್ಧವೆ ವಿಘಟಿಗೆ ೪ ಈ ಘಟಿಗೆ ವಿಘಟಿಗೆಗಳನ್ನ ಮಧ್ಯಾಹ್ನ ಪ್ರಮಾಣದ ೧೫-೮ರಲ್ಲಿ ಕೂಡಲು ಪೂರ್ಣಿಮಾ ಘಟಿಗೆ ಯಾಯಿತು ೩೩-೧೨ ಸ್ಫುಟ

ಚಂದ್ರ ೬-೧೪-೫೮-೩೮ ಲಿಪ್ತಿ ೧೧೬೯೮-೩೮ ಇದಂ ೮೦೦ರಿಂದ ಭಾಗಿಶಿದ ಲಬ್ಧ ೧೪ ಅಶ್ವಿನ್ಯಾದಿ ಚಿತ್ರಾಂತಗತ ಸಂಖ್ಯೆಯಾಯಿತು ಶೇಷ ೪೯೮-೩೮ ಇದಂ ೮೦೦ ಲಿಪ್ತಿಯಲ್ಲಿ ಕಳದು ೩೦೧-೨೨ ಸವರ್ಣಿಶಿದ್ದು ೧೮೦೮೨ ಚಂದ್ರಗತಿ ೭೩೨-೨೯ ಸವರ್ಣಿಶಿದ್ದು ೪೩೯೪೯ ಇದರಿಂದ ಸವರ್ಣಿತವಾದ ೧೮೦೮೨ನ್ನು ಭಾಗಿಶಿ ಪೂರ್ವೋ ರೀತ್ಯಾ ಬಂದ ಸ್ವಾತೀನಕ್ಷತ್ರ ಘಳಿಗೆ ವಿಘಳಿಗೆಗಳು ೦-೨೪ ಮಧ್ಯಾಹ್ನ ೧೫-೯ ರಲ್ಲಿ ಕೂಡಲು ಉದಯಾದಿ ಸ್ವಾತೀನಕ್ಷತ್ರಘಳಿಗೆ ೧೫-೩೩ ರವಿ ಚಂದ್ರ ಸ್ಫುಟಯೋಗ ೭-೩-೨೦-೧೮ ಈಸಾರ್ಕೇಂದು ಲಿಪ್ತಿ ೧೨೮೦೦-೧೮ ಇದನ್ನು ೮೦೦ ರಿಂದ ಭಾಗಿಶಿದ ಲಬ್ಧ ೧೬ ವಿಷ್ಕಂಭಾದಿ ಸಿದ್ಧಿಯೋಗಾಂತ ಸಂಖ್ಯೆಯಾಯಿತು ಶೇಷ ೦-೧೮ ಸವರ್ಣಿಸಲಾಗಿ ೧೮ ವಿಲಿಪ್ತಿಯಾಯಿತು ಸವರ್ಣಿತಸಾರ್ಕೇಂದು ಗತಿ ೪೭೪೦೦ ಭಾಗಿಸಲು ಘಳಿಗೆ ಇಲ್ಲವಾಗಿ ಮಧ್ಯಾಹ್ನ ಪ್ರಮಾಣಕ್ಕೆ ಸರಿಯಾಗಿ ಸಿದ್ಧಿಯೋಗ ಕಳಿಯುತ್ತ ಇದ್ದರಿಂದ ಸಿದ್ಧಿಯೋಗ ೧೫-೯.

ವ್ಯರ್ಕೇಂದು ಲಿಪ್ತಿ ೧೦೫೯೬-೫೮ ಇದಂ ೩೬೦ ರಿಂದ ಭಾಗಿಶಿದ ಲಬ್ಧ ೨೯ ರಲ್ಲಿ ೧ ಕಳದ್ದು ೨೮ನ್ನು ೭ ರಿಂದ ಭಾಗಿಸಲು ಶೇಷವಿಲ್ಲವಾಗಿ ೭ನೇದಾದ ಭದ್ರ ಕರಣವೆ ಪೂರ್ವಾರ್ಧ ಕರಣವಾಯಿತು ಶೇಷ ೧೫೬-೫೮ ಸವರ್ಣಿಸಲು ೯೪೧೮ ಇದಂ ೬೦ ರಿಂದ ಗುಣಿಸಲು ೫೬೫೦೮೦ ವ್ಯರ್ಕೇಂದು ಗತಿ ಸವರ್ಣ ೪೦೪೬೧ ರಿಂದ ಭಾಗಿಶಿದ ಘಳಿಗೆ ವಿಘಳಿಗೆ ೧೩-೫೭ ಇದು ಗತವಾದ್ದರಿಂದ ಮಧ್ಯಾಹ್ನ ೧೫-೯ ರಲ್ಲಿ ಕಳದ ಶೇಷವೇ ಭದ್ರ ಕರಣ ಘಳಿಗೆ ೧-೧೨ ಶೇಷವಾದ ೧೫೬-೫೮ನ್ನು ೩೬೦ ಲಿಪ್ತಿಯಲ್ಲಿ ಕಳದು ಸವರ್ಣಿಶಿ ಪೂರ್ವೋಕ್ತರೀತ್ಯಾ ವ್ಯರ್ಕೇಂದು ಗತಿ ಇಂದ ಬಂದ ಘಳಿಗೆ ವಿಘಳಿಗೆ ೧೮-೪ ಮಧ್ಯಾಹ್ನದಲ್ಲಿ ಕೂಡಲು ಪೂರ್ಣಿಮಾ ಘಳಿಗೆಯಾದ ೩೩-೧೩ ಆಯಿತು ಈಕಾಲಕ್ಕೆ ಸರಿಯಾಗಿ ಬವಕರಣ ಘಳಿಗೆ ಆಯಿತು.

ಅವ॥ ವಿಷಘಟಿಕಾನಯನವು ಹೇಳಲ್ಪಡುತ್ತೆ.

ಮೂ॥ ಖಖುಗಜನಿಹತವಿಷದ್ರುವಘಟಿಕಾಶ್ಶಶಿಭುಕ್ತಿಹೃತ್ಫಲಂತ್ವಗತೇ ।
ನಕ್ಷತ್ರೇಸಹಿತಂಯದಿವಿಷನಾಡ್ಯಸ್ಸಂಭವಂತಿಕಿಂಬಹುಧಾ॥೨೨॥

ಇತಿ ಶ್ರೀಮಚ್ಛಂಕರ ಭಾರತೀಂದ್ರ ವಿರಚಿತೇ ಖಚರದರ್ಪಣೇ
ಮಂದಸ್ಫುಟಾಧ್ಯಾಯೋ ದ್ವಿತೀಯಃ

ಟೀ॥ ನಕ್ಷತ್ರ ವಿಷಧ್ರುವ ಈಗ್ರಂಥದಲ್ಲಿ ಹೇಳವೆ ಇದ್ದಾಗ್ಯೂ ವಿಷಘಟಿಕಾನಯನ ಹೇಳಿರುವದರಿಂದ (ಅನುಕ್ತಮನ್ಯತೋಗ್ರಾಹ್ಯಂ) ಎಂಬರೀತ್ಯಾ ಇತರ ಗ್ರಂಥಾಂತರದಿಂದ ತಿಳಿಯಬೇಕು ಈವಿಷಧ್ರುವ ವಿಷಯವನ್ನು ಗ್ರಂಥದ ಕೊನೆಯಲ್ಲಿ ಉದಹರಿಸಲ್ಪಡುತ್ತೆ. ಆಯಾಯ ನಕ್ಷತ್ರ ವಿಷಧ್ರುವವನ್ನು ೮೦೦ರಿಂದ ಗುಣಿಶಿ ಚಂದ್ರಗತಿಇಂದ ಭಾಗಿಶಿ ಬಂದ ಘಳಿಗೆ ವಿಘಳಿಗೆಯನ್ನು ಪೂರ್ವನಕ್ಷತ್ರ

ಘಳಿಗೆಗಳಲ್ಲಿ ಕೂಡಲು ವರ್ತಮಾನನಕ್ಷತ್ರ ವಿಷಘಳಿಗೆಯಾಗುವದು ಈವಿಷ ಘಳಿಗೆ ಅಹಃಪ್ರಮಾಣಕ್ಕೆ ಕಡಮೆಯಾದಾಗ ದಿನಾತ್ತ್ಯಾಜ್ಯವೆಂತಲೂ ಅಧಿಕವಾದಾಗ ಅಹಃಪ್ರಮಾಣಕಳೆದ ಶೇಷವು ರಾತ್ರಿತ್ಯಾಜ್ಯವೆಂತಲೂ ತಿಳಿಯಬೇಕು. ೨೩॥

ಉದಾಹರಣ.

ವಿಶಾಖಾ ನಕ್ಷತ್ರವಿಷಧ್ರುವ ೧೪ ಇದನ್ನು ೮೦೦ ರಿಂದ ಗುಣಿಸಲು ೧೧೨೦೦ ಇದನ್ನು ೬೦ ರಿಂದ ಗುಣಿಸಲು ೬೭೨೦೦೦ ಸ್ವವರ್ತಿತ ಚಂದ್ರಸ್ಫುಟ ಗತಿ ೮೩೯-೪೯ ರಿಂದ ಭಾಗಿಸಿ ಬಂದ ಘಳಿಗೆ ವಿಘಳಿಗೆ ಗಳು ೧೫-೧೮ ಸ್ವಾತೀ ನಕ್ಷತ್ರಘಳಿಗೆ ೧೫-೨೨ ರಲ್ಲಿ ಕೂಡಲು ಉದಯಾದಿ ವಿಶಾಖಾನಕ್ಷತ್ರ ವಿಷಘಳಿಗೆ ಗಳು ೩೦-೪೦ ಅಹಃಪ್ರಮಾಣ ೩೦-೧೮ ನ್ನು ಕಳೆಯಲು ರಾತ್ರಿತ್ಯಾಜ್ಯವಾಯಿತು ರಾ-ವಿ॥ ೦-೨೨

ಶು॥ ಪ್ರಾಪ್ತಿ ೨೨-೧೨ ಸ್ವಾ ೧೫-೨೨ ಸಿದ್ಧಿ ೧೫-೯ ಘ ೧-೧೨ ಬ ೨೨-೧ ರಾ ವಿ ೦-೨೨.

ಇಂತು ಖಚರದರ್ಪಣದ ಭಾವಬೋಧಿನೀಟೀಕಿನೊಳ್

ಮಂದಸ್ಫುಟಾಧ್ಯಾಯವು

ಸಂಪೂರ್ಣಂ



ಶ್ರೀ

ಖಚರದರ್ಪಣೆ

ಶೀಘ್ರಸ್ಫುಟಾಧ್ಯಾಯ ಪ್ರಾರಂಭಃ.

ಶ್ಲೋ॥ ಯಮಷ್ಟಮೂರ್ತಿಂ ಶ್ರುತಯೋವದಂತಿಯಾಃ ತಸ್ಯಶಕ್ತಿಸ್ತನಯಶ್ಚ ಖೇಚ ।
ಯದ್ದಕ್ಷಿಣಾಕ್ಷೀತಿ ಚ ಸಪ್ರಪಂಚಂ ತದಸ್ಮಿಪಂಚಾಯತನಂ ನಮಸ್ಯೇತ್ ॥೧॥

ಟೀ॥ ವೇದವೇದಾಂಗಗಳೂ ಯಾವಪರಮಾತ್ಮನನ್ನು ಪೃಥಿವ್ಯಪ್ತೇಜೋವಾಯ್ವಾಕಾಶ ವೆಂಬ ಪಂಚೇಂದ್ರಿಯಂಗಳೂ ಸೂರ್ಯಚಂದ್ರರೂ ಯಜಮಾನನೂ ಈ ಅಷ್ಟಮೂರ್ತಿಗಳೊಡನೆ ಕೂಡಿದವನೆಂಬದಾಗಿ ಹೇಳುತ್ತವೆಯೊ ಚೇತನಾಸಂವೃತನಾಗಿ ಸತ್ವರಜಸ್ತಮಗಳೆಂಬ ಗುಣತ್ರಯರೂಪವಾದ ಮೂಲಪ್ರಕೃತಿಯು ಯಾವಪರಮಾತ್ಮನಿಗೆ ಶಕ್ತಿಯಾಗಿದೆಯೊ ಪರಮೇಶ್ವರನ ಶಕ್ತಿಗಳಿಗೆ ಅಂದರೆ ಪಾರ್ವತೀ ಪರಮೇಶ್ವರರಿಗೆ ಪುತ್ರನಾದ ಗಣೇಶ ಸುಬ್ರಹ್ಮಣ್ಯಾದ್ಯವತಾರವುಳ್ಳವನೂ ವಿಷ್ಣು ಕುಬೇರರೇಮಿತ್ರರೊ ಯಾರುಸೂರ್ಯನೇ ದಕ್ಷಿಣನೇತ್ರವಾಗಿಉಳ್ಳವನೊ ಯಾವನು ಅದ್ವಿತೀಯನೊ ಆವಿರಾಟಸ್ವರೂಪನಾದಪರಮಾತ್ಮನೇ ನಾನಾದ್ದರಿಂದ ನನಗಿಂತಬೇರೇಯಾದ ವಸ್ತ್ವಂತರವಿಲ್ಲಾಯೆಂಬದಾಗಿ ನಿರ್ದೇಶಿಸುತ್ತಾರೆ. ॥೧॥

ಅವ|| ಶೀಘ್ರಸ್ಫುಟಸಾಧನವು.

ಮೂ|| ಕುಜಜೀವಭಾನುಜಾನಾಮರ್ಕಃಶೀಘ್ರೋಚ್ಚನಾಮಕೋಭವತಿ ।
ಬುಧಭಾರ್ಗವಯೋರ್ಗ್ರಹೋಚ್ಚತೋನೋಕೇಂದ್ರತಸ್ಮಾದ್ದಿಬಾಹುಶ್ಚ ||

ಟೀ|| ಕುಜ ಗುರು ಶನಿಗಳಿಗೆ ಮಧ್ಯರವಿಯೇ ಶೀಘ್ರೋಚ್ಚವು ಬುಧಶುಕ್ರರಿಗೆ ರವಿಯೆ ಮಧ್ಯಗ್ರಹವು ಕುಜಾದಿಗ್ರಹಗಳನ್ನು ತಮ್ಮ ತಮ್ಮ ಶೀಘ್ರೋಚ್ಚಗಳಿಂದಾ ಶೋಧಿತವಾದ ಕೇಂದ್ರದಿಂದಾ ಭುಜಕೋಟಿಜ್ಯೆಯನ್ನು ಸಾಧಿಸಬೇಕು.

ಅವ|| ಶೀಘ್ರಮಧ್ಯಭೇದಕಾನಯನವು.

ಮೂ|| ಮಂದಸ್ಫುಟವಿಚ್ಛೇದೋವೇದಘ್ನೋಮನುವಿಭಕ್ತಃ ಪ್ರಾಪ್ತಂ ।
ಭೌಮಸ್ಯಮಧ್ಯಕರ್ಣಸ್ಸ್ಯಾದಧಸೌಮ್ಯಸ್ಯಮೂರ್ಛನಾಃ ||೪|| ತ್ರಿಘ್ನೋ
ಗುರುಮಂದಭೇಷ್ಟಡ್ಭವೇದಭಾಜಿತೋವ್ಯಾಸಃ । ಸ್ಯಾದ್ಭಾರ್ಗವಸಕರ್ಣ
ಶ್ಚವತುಲ್ಯಶ್ಚತಿನಿಶ್ಚಿತೋವಿಬುಧೈಃ ||೪|| ರವಿಜಸ್ಯಮಂದವಿಭೇದಶ್ಯೈಲ
ಘ್ನೋರಸೈರ್ವಿಭಕ್ತಸ್ತು । ವ್ಯಾಸೋಮಧ್ಯೋಭವತೀತ್ಯೇವಂಬಹುಬುಧಜ
ನಾವದಂತೀಹ ||೫||

ಟೀ|| ಪೂರ್ವೋಕ್ತಕುಜಮಂದ ಛೇದವನ್ನು ೪ ರಿಂದ ಗುಣಿಸಿ ೧೪ ರಿಂದ ಭಾಗಿಸಲು ಶೀಘ್ರಮಧ್ಯಕರ್ಣವಾಗುವದು ಬುಧನಿಗೆ ೨೧ ಶೀಘ್ರಮಧ್ಯಭೇದವು ಗುರುಮಂದಭೇದವನ್ನು ೩ ರಿಂದಗುಣಿಶಿ ಲಿಪ್ತಿಕರಿಶಿ ४೦೧ ರಿಂದಭಾಗಿಶಿದ್ದೇ ಶೀಘ್ರಮಧ್ಯಭೇದವು ಶುಕ್ರನಿಗೆ ೧೧ ಶೀಘ್ರಮಧ್ಯವು ಶನಿಮಂದಭೇದವಂ ೭ ರಿಂದಗುಣಿಶಿ ೬ ರಿಂದ ಭಾಗಿಶಿದರೆ ಶೀಘ್ರಮಧ್ಯಭೇದವಾಗುವದು.

ಅವ|| ಶೀಘ್ರಭೇದಸ್ಫುಟೀಕರಣೋಪಾಯವು

ಮೂ|| ಏತೇಕುಜಾದಿಕಾನಾಂಬಾಹುಜ್ಯಾತ್ರ್ಯಂಶಸಂಯುತಾಸ್ಸರ್ವೇ ।
ಕೋಟಿಜ್ಯಾಭಿಸ್ಸಹಿಂತಾಃವಿಯುತಾಸ್ತೆಸ್ಫುಟತರಾಸ್ಸ್ಯುರ್ಮೋಛೇದಾಃ ||೬||
ಧನಕೋಟಿಜ್ಯಾಚೇದ್ಯುತಮೃಣಕೋಟಿಜ್ಯಾಯದೀಹವಿಯುತಂಸ್ಯಾತ್
ಧನಮೃಣಮುನಿಶಂಜ್ಞೆಯಂಕೇಂದ್ರಾನ್ಮೃಗಕರ್ಕಟಾದಿಸಂಸ್ಥಾಚ್ಚ ||

ಟೀ|| ಭುಜಜ್ಯೆಯನ್ನು ೩ ರಿಂದಭಾಗಿಶಿದ ಲಬ್ಧವನ್ನು ಶೀಘ್ರಮಧ್ಯಭೇದದಲ್ಲಿ ಶೇರಿಸುವದು ಇದಕ್ಕೆ ಕೋಟಿಜ್ಯೆಯನ್ನು ಮಕರಾದಿಕೇಂದ್ರವಾದರೆ ಕೂಡುವದು ಕಟಕಾದಿಕೇಂದ್ರವಾದರೆ ಕಳಿಯುವದು ಸ್ಫುಟಶೀಘ್ರಭೇದವಾಗುವದು.

ಅವ|| ಭುಜಾಫಲಸಂಸ್ಕಾರವು.

ಮೂ|| ಲಿಪ್ತೀಕೃತಬಾಹುಜ್ಯಾಸ್ಫುಟಶೀಘ್ರಛೇದಭಾಜಿತಃಫಲಂ ।
ಭಾಗಾದ್ಯಂಧನಮೃಣಮೇಷಾದಿತುಲಾದಿಸ್ಥಿತಾಚ್ಚಕೇಂದ್ರಾಚ್ಚ ||೮||

ಟೀ॥ ಭಾಗಾದಿ ಭುಜಜ್ಯೆಯನ್ನು ಲಿಪ್ತೀಕರಿಶಿ ಸ್ಫುಟಶೀಘ್ರಕರ್ಣದಿಂದ ಭಾಗಿಸಲು ಬಂದಭಾಗಾದಿಫಲವನ್ನು ಮೇಷಾದಿಕೇಂದ್ರವಾದರೆ ಧನವೂ ತುಲಾದಿ ಕೇಂದ್ರವಾದರೆ ಋಣವೂ ಮಾಡಲು ಕುಜಾದಿ ಪಂಚಗ್ರಹಸ್ಫುಟವಾಗುವದು॥೮॥

ಉದಾಹರಣ.

ಮಂದಸ್ಫುಟಕುಜಃ ೨-೯-೨೬-೫೭ ರವಿಯೇಶೀಘ್ರೋಚ್ಚ ೦-೧೬-೫೫-೫೫ ಶೀಘ್ರಕೇಂದ್ರ ೧೦-೭-೩೮-೫೮ ಧನಕೋಟಿ ೧-೭-೩೮-೫೮ ಋಣಭುಜ ೧-೨೨-೨೧-೨ ಭುಜಜ್ಯಾ ೬-೨೬-೭ ಕೋಟಿಜ್ಯಾ ೪-೫೬ ಸ್ಫುಟಮಂದಛೇದ ೪೩-೨೬ (ಇದಂ ೪ ರಿಂದಗುಣಿಶಿ ೧೪ ರಿಂದ ಭಾಗಿಶಿ ಬಂದ ವ್ಯಾಸವು ೧೨-೨೪ ಭುಜಜ್ಯೆಯ ೩ನೆ ಅಂಶ ೨-೮ ಧನಕೋಟಿಜ್ಯಾ ೪-೫೬) ಮೂರನ್ನು ಶೇರಿಸಲು ಸ್ಫುಟಶೀಘ್ರಛೇದವು ೧೯-೨೮ ಇದರಿಂದ ಭುಜಜ್ಯೆಯನ್ನು ಭಾಗಿಶಿ ಬಂದಭಾಗಾದಿಫಲ ೧೯-೫೦-೫ನ್ನು ಕಳದಸ್ಫುಟಕುಜಃ ೧-೧೯-೩೬-೫೨.

ಬುಧಶೀಘ್ರಸ್ಫುಟ.

ಮಂದಸ್ಫುಟ ಬುಧ ೦-೧೪-೫೫-೪೮ ಬುಧ ಶೀಘ್ರೋಚ್ಚ ೧೦-೧೬-೨೩-೩೩ ಶೀಘ್ರಕೇಂದ್ರ ೧೦-೧-೩೧-೪೫ ಧನ ಕೋಟಿ ೧-೧-೩೧-೪೫ ಋಣ ಭುಜ ೧-೨೮-೨೮-೧೫ ಭುಜಜ್ಯೆ ೭-೦-೭ ಕೋಟಿಜ್ಯೆ ೪-೧೩ ಬುಧ ಮಧ್ಯ ಕರ್ಣ ೨೧ ಭುಜಜ್ಯೆಯ ೩ನೆ ಅಂಶ ೨-೨೦ ಈಮೂರುಕೂಡಿದ ಸ್ಫುಟ ಶೀಘ್ರಛೇದ ೨೭-೩೩ ಇದರಿಂದ ಭುಜಜ್ಯೆಯನ್ನು ಭಾಗಿಶಿ ಬಂದ ಭಾಗಾದಿ ಫಲ ೧೫-೧೪-೪೨ ರಹಿತವಾದ ಸ್ಫುಟ ಬುಧ ೧೧-೨೯-೪೧-೬.

ಗುರುಸ್ಫುಟ.

ಮಂದಸ್ಫುಟ ಗುರು ೫-೩-೫೭-೫೭ ರವಿ ಮಧ್ಯವೆ ಗುರು ಶೀಘ್ರ-೦-೧೬-೫೫-೫೫ ಶೀಘ್ರಕೇಂದ್ರ ೭-೧೨-೫೭-೫೮ ಋಣಭುಜ ೧-೧೨-೫೭-೫೮ ಕೋಟಿ ೧-೧೭-೨-೨ ಭುಜಜ್ಯೆ ೫-೪೦-೪೪ ಕೋಟಿಜ್ಯೆ ೫-೫೫ ಸ್ಫುಟಮಂದಛೇದ ೯೧-೫೦ ಇದಂ ೩ ರಿಂದ ಗುಣಿಶಿ ಲಿಪ್ತಿಮಾಡಿ ೪೦೧ ರಿಂದ ಭಾಗಿಶಿ ಬಂದ ಮಧ್ಯವ್ಯಾಸ ೪೧-೧೩ ಭುಜಜ್ಯೆಯ ೩ನೆ ಅಂಶ ಸಹಿತ ಮಧ್ಯವ್ಯಾಸ ೪೩-೬ ಕೋಟಿಜ್ಯಾ ರಹಿತಸ್ಫುಟ ಶೀಘ್ರಛೇದ ೩೭-೧೧ ಇದರಿಂದ ಭುಜಜ್ಯೆಯನ್ನು ಭಾಗಿಶಿ ಬಂದ ಭಾಗಾದಿಫಲ ೯-೯ ೪೮ ರಹಿತಸ್ಫುಟ ಗುರು ೪-೨೪-೪೮-೯.

ಶುಕ್ರಸ್ಫುಟ.

ಮಂದಸ್ಫುಟ ಶುಕ್ರ ೦-೨೦-೨೯-೨೪ ಶೀಘ್ರೋಚ್ಚ ೨-೧-೨೯-೧೫ ಶೀಘ್ರಕೇಂದ್ರ ೧-೧೦-೫೯-೫೧ ಇದೆ ಭುಜ ಧನಕೋಟಿ ೧-೧೯-೦-೯ ಧನಭುಜಜ್ಯೆ ೫-೧೮-೩೩ (ಕೋಟಿಜ್ಯೆ ೬-೭ ಮಧ್ಯವ್ಯಾಸ ೧೧ ಭುಜಜ್ಯೆಯ ೩ನೆ ಅಂಶ ೧-

೪೬) ಈಮೂರು ಶೇರಿದ ಶೀಘ್ರಭೇದ ೧೮-೫೩ ಇದರಿಂದ ಭುಜಜ್ಯೆಯನ್ನು ಭಾಗಿಶಿ ಬಂದ ಭಾಗಾದಿ ಫಲ ೧೭-೧೦-೧೭ ಸಂಸ್ಕೃತ ಶುಕ್ರಸ್ಪುಟ ೧-೭-೩೯-೪೧.

ಶ ನಿ ಸ್ಪು ಟ

ಮಂದಸ್ಪುಟ ಶನಿ: ೯-೪-೧೩-೩ ರವಿಮಧ್ಯವೆ ಶನಿ ಶೀಘ್ರ ೦-೧೬-೫೫-೫೫ ಶೀಘ್ರಕೇಂದ್ರ ೩-೧೨-೪೨-೩೨ ಧನಭುಜ ೨-೧೭-೧೭-೨೮ ರುಣಕೋಟಿ ೦-೧೨-೪೨-೩೨ ಭುಜಜ್ಯೆ ೮-೮-೪೭ ಭುಜಜ್ಯೆಯ ೩ನೆ ಅಂಶ ೨-೪೩ ಕೋಟಿಜ್ಯೆ ೧-೪೬ (ರಹಿತ ೦-೫೭ ಸ್ಪುಟಮಂದಭೇದ ೬೫-೪೨ ಇದನ್ನ ೭ ರಿಂದ ಗುಣಿಶಿ ೬ರಿಂದ ಭಾಗಿಶಿಬಂದ ಲಬ್ಧವ್ಯಾಸ ೭೫-೪೮) ಈಯೆರಡೂ ಶೇರಿಸಲು ಸ್ಪುಟಭೇದ ೭೬-೪೫ ಇದರಿಂದ ಭುಜಜ್ಯೆಯನ್ನು ಭಾಗಿಶಿ ಬಂದ ಭಾಗಾದಿಫಲ ೬-೨೧-೩೦ ಸಂಕಲಿತ ಸ್ಪುಟ ಶನಿ ೯-೧೦-೩೪-೪೩.

ಅವ॥ ಕುಜಾದಿಗಳಿಗೆ ಶೀಘ್ರಗತಿ ಸಾಧನವು.

ಮೂ॥ ಶೀಘ್ರೋಚ್ಚಮಂದಗತ್ಯೋರ್ವಿವರಂದೋಃಫಲವಿಕರ್ತನಾಂಶನ ।
ಶೋಧಿತದೋಸ್ತ್ರ್ಯಂಶಯುತವ್ಯಾಸೇನಾಹತ್ಯಶೀಘ್ರಜನಿತೇನ॥ ೯॥
ಭೇದೇನವಿಹೃತಂತತ್ಫಲಮನಿಶಂಶೀಘ್ರಭುಕ್ತಿತಶ್ಶೋಧ್ಯಂ ।
ಶಿಷ್ಟಂಸ್ಯಾಚ್ಛುದ್ಧಗತಿಃಫಲತೋಯದಿಶೋಧಿತಾ ಹಿವಕ್ರಗತಿಃ ॥

ಟೀ॥ ಗ್ರಹಗಳ ಶೀಘ್ರ ಮಧ್ಯಗತಿಯಲ್ಲಿ ಮಂದಸ್ಪುಟಗತಿಯನ್ನು ಕಳದು ನಿಂತ ಶೇಷವೇಗತ್ಯಂತರವು,ಪುರ್ಜ್ಯಾಕ್ಕೆ ಕೋಟಿಜ್ಯಾ ಸಂಸ್ಕರಮಾಡದೆ ಇರುವ ಭೇದದಲ್ಲಿ ಭುಜಾಫಲದ ೧೨ನೆ ಅಂಶವನ್ನು ಕಳದು ನಿಂತ ಶೇಷದಿಂದಗತ್ಯಂತರವನ್ನು ಗುಣಿಶಿ ಸ್ಪುಟ ಶೀಘ್ರಭೇದದಿಂ ಭಾಗಿಶಿ ಬಂದಫಲವನ್ನು ಶೀಘ್ರ ಭುಕ್ತಿಯಲ್ಲಿ ಶೋಧಿಸುವದು ನಿಂತಶೇಷವೇ ಶುದ್ಧ ಶೀಘ್ರಗತಿ ಶೀಘ್ರ ಭುಕ್ತಿಕಿಂತಲು ಅಧಿಕವಾದಾಗ ಫಲದಲ್ಲಿ ಭುಕ್ತಿ ಶೋಧಿಸಿ ನಿಂತಶೇಷವೇ ವ್ಯತ್ಯಸ್ತವಾದ ವಕ್ರಗತಿಯನ್ನಾಗಿ ತಿಳಿಯುವದು.

ಉ ದಾ ಹ ರ ಣ ೦.

ಕುಜ ಮಂದಸ್ಪುಟಗತಿ ೨೯-೩೪ ಶೀಘ್ರೋಚ್ಚಗತಿ ೫೯-೮ ಅಂತರ ೨೯-೩೪ (ಭುಜಾಫಲ ದ್ವಾದಶಾಂಶ ೧-೩೯ ಕೋಟಿಜ್ಯಾ ಸಂಸ್ಕರಿಸದ, ಭುಜಾಫಲದ ೩ನೆ ಅಂಶ ಕೂಡಿದ ವ್ಯಾಸ ೧೪-೩೭) ಈಎರಡಕ್ಕೂ ಅಂತರ ೧೭-೫೫ ಇದರಿಂದ ಗತ್ಯಂತರವನ್ನು ಗುಣಿಶಿ ಶೀಘ್ರಭೇದವಾದ ೧೯-೭೮ ರಿಂದ ಭಾಗಿಶಿ ಬಂದ ಫಲ ೧೯-೩೫ನ್ನು ಶೀಘ್ರಗತಿಯಾದ ೫೯-೮ ರಲ್ಲಿ ಶೋಧಿಶಿದ ಶೇಷವಾದ ೩೯-೩೩ ಇದೆ ಕುಜಸ್ಪುಟಗತಿ. ಹೀಗೆ ಸಾಧಿತವಾದ ಬುಧಗತಿ ೯೯-೫೭ ಹೀಗೆ ಸಾಧಿಶಿದಫಲ ೬೩-೩೯ ಇದನ್ನು ಶೀಘ್ರಗತಿಯಲ್ಲಿ ಕಳೆಯುವದಕ್ಕಾಗುವದಿಲ್ಲವಾ

ದ್ದರಿಂದ ಶೀಘ್ರಗತಿಯಾದ ೫೯-೪ನ್ನು ಕಳೆದ ಶೇಷವಾದ ೮-೩೧ ಸ್ಫುಟ ಗುರುಗತಿ. ಹೀಗೆ ಪೂರ್ವೋಕ್ತರೀತ್ಯಾನೀತ ಶುಕ್ರಗತಿ ೭೩-೮೦ ಇದರಂತೆ ಸಾಧಿಸಲ್ಪಟ್ಟ ಶನಿಸ್ಫುಟಗತಿ ೦-೫೬.

ಅವ॥ ಗ್ರಹಗಳಿಗೆ ವಕ್ರಾರಂಭವಕ್ರತ್ಯಾಗ ಶೀಘ್ರಕೇಂದ್ರಭಾಗವು.

ಮೂಲ॥ ಗುಣರ್ತುಚಂದ್ರೈರ್ನಗಸಿವೇದಚಂದ್ರೈರ್ಬಾಣಾಕ್ಷಿ ಚಂದ್ರೈರ್ಗಿರಿತರ್ಕಚಂ
ದ್ರೈಃ । ತ್ರಿಚಂದ್ರಚಂದ್ರೈರ್ಗತಿವಕ್ರತಾಪ್ತಿಃ ಕುಜಾದಿಕಾನಾಂ ಬೆಗಣೋನಿ
ತಾಂತಾ॥ ೧೧॥

ಇತಿ ಶ್ರೀಮುಭಂಕರ ಭಾರತೀಂದ್ರ ವಿರಚಿತೇ ಖಚರದರ್ಪಣೇ
ಶೀಘ್ರಸ್ಫುಟಾಧ್ಯಾಯಸ್ತೃತೀಯಃ



ಟೀ॥ ಕುಜಾದಿಗಳಿಗೆ ವಕ್ರಾರಂಭ ಶೀಘ್ರಕೇಂದ್ರಭಾಗವು ಕುಜನಿಗೆ ೧೬೩ ಬುಧನಿಗೆ೧೪೫ಗುರುವಿಗೆ೧೨೫ ಶುಕ್ರನಿಗೆ ೧೬೭ ಶನಿಗೆ೧೧೩ಈಭಾಗಗಳಿಗೆ ವಕ್ರಾರಂಭವು ಈಭಾಗಗಳನ್ನು ಭಗಣಸಂಖ್ಯೆಯಾದ ೧೨ ರಾಶಿ ಭಾಗ ೩೬೦ ರಲ್ಲಿ ಕಳೆದ ಶೇಷಭಾಗಕ್ಕೆ ಋಜುಗತಿ ಪ್ರಾರಂಭವು ಹೀಗೆ ಕಳೆಯಲ್ಪಟ್ಟ ವಕ್ರತ್ಯಾಗ ಶೀಘ್ರಕೇಂದ್ರ ಭಾಗವು ಕುಜನಿಗೆ ೧೯೭ ಬುಧನಿಗೆ ೨೧೫ ಗುರುವಿಗೆ ೨೩೫ ಶುಕ್ರನಿಗೆ ೧೯೩ ಶನಿಗೆ ೨೪೭ ಈಭಾಗಗಳಿಗೆ ವಕ್ರನಿವೃತ್ತಿಯಾಗುವದು ಈಕುಜಾದಿಗ್ರಹಗಳನ್ನು ದೃಕ್ಸಿದ್ಧಪ್ರಕಾರವಾಗಿಯೇ ಸಾಧಿಸತಕ್ಕದ್ದು ರೂಢಿಯಾಗಿರುತ್ತ.

ಇಂತು ಖಚರದರ್ಪಣದ ಭಾವಬೋಧಿನೀಯೆಂಬ
ಕರ್ಣಾಟಭಾಷಾ ಟೀಕಿನೊಳ್ ಶೀಘ್ರಸ್ಫುಟಾಧ್ಯಾಯವು.



ಶ್ರೀ

## ಉಪಕರಣಾಧ್ಯಾಯಃ.



ಅವ॥ ಅದ್ವಿತೀಯನಾದ ಪರಬ್ರಹ್ಮವಸ್ತುವನ್ನು ಸ್ತೋತ್ರಮಾಡುತ್ತಾರೆ.

ಮೂಲ॥ ಸತ್ವಂರಾಜಸತಾಮಸಂ ಸವಳಿತಂ ಭಾತಿವೈದಿಕಂವಸ್ತುಂ ।
ವಿಷ್ಣ್ವಾಖ್ಯಂ ತದ್ರೂಪಂ ಶಿವಮದ್ವೈತಂಚಿದೇಕರಸಮೀಡೇ॥ ೧॥

ಟೀ॥ ರಾಜಸ ತಾಮಸಗುಣಗಳಿಂದ ಕೂಡಿದ್ದಾಗ್ಯೂ ಸತ್ವಗುಣ ಪ್ರಧಾನವಾಗಿಯೂ ವೇದಪ್ರೋಕ್ತವಾಗಿಯೂ ವಿಷ್ಣುವೆಂಬ ಹೆಸರುಳ್ಳದ್ದಾಗಿಯೂ ತತ್ವಸ್ವರೂಪಮಯವಾಗಿಯೂ ಜ್ಞಾನಸ್ವರೂಪವು ಉಳ್ಳದ್ದಾಗಿಯೂ ಮಂಗಳಕರವಾದದ್ದು

ಗಿಯೂ ಅದ್ವಿತೀಯವಾಗಿಯೂ ಇರುವ ಪರಬ್ರಹ್ಮಾತ್ಮಕವಸ್ತುವನ್ನು ಸ್ತೋತ್ರ ಮಾಡುತ್ತೇನೆ.

ಅಥ॥ ಶಂಕುಛಾಯಯಾ ವಿಷುವತ್ಕರ್ಣ ಸಾಧನೋಪಾಯವು.

ಮೂ॥ ಮೇಷತುಲಾಯನಗೇ ಖರಕಿರಣೇ ಸಮಭೂಮೌ ಮಧ್ಯಾಹ್ನೇ ಶಂಕುಂ ।
ಋಜುರರ್ಕಾಂಗುಳಪರಿಮಿತಮುಚ್ಛ್ರಿತರಾತಪದೃಷ್ಟಾಂತಸ್ಯಛಾಯಾಂ॥ ೨॥
ವಿಷುವಛಾಯಾಮಾಹುರುದೀಚೀಮಾರ್ಯಾಸ್ತದ್ಭಾಂಗುಳಕೃತಿಯುಕ್ತಾ ।
ಶಂಕುಕೃತಿರ್ಯನ್ಮೂಲಂವಿಷುವತ್ಕರ್ಣ ಇತಿತ್ರಯಮಾದೌಜ್ಞೇಯಂ॥ ೩॥

ಟೀ॥ ಸಾಯನರವಿ ಮೇಷತುಲಾಯನ ದಿನದಲ್ಲಿ ಜಲಸಮತ್ವವಾದ ಭೂಮಿಯಲ್ಲಿ ನೇರವಾದ ಮೊನೆಯಾದ ಅಗ್ರಭಾಗ ಉಳ್ಳ ೧೨ ಅಂಗುಳಪ್ರಮಾಣ ವಿರುವ ಶಂಕುವನ್ನು ಸ್ಥಾಪಿಸಿ ಮಧ್ಯಾನಕಾಲದಲ್ಲಿ ಶಂಕುವಿಗೆ ಉತ್ತರಭಾಗದಲ್ಲಿ ಕಾಣುವ ಛಾಯೆಯನ್ನು ಅಂಗುಳ ಪರಿಮಾಣದಿಂದ ತಿಳಿಯಬೇಕು. ಈ ಛಾಯೆಯನ್ನು ವರ್ಗಮಾಡಿ ಶಂಕು ಪ್ರಮಾಣವಾದ ೧೨ ರವರ್ಗ ೧೪೪ ರಲ್ಲಿ ಕೂಡಿ ಮೂಲಮಾಡಿದರೆ ಸ್ವದೇಶ ವಿಷುವ ತ್ಕರ್ಣವಾಗುವದು.

ಉ ದಾ ಹ ರ ಣಂ.

ಕುಂಡಿನೀನಗರಕ್ಕೆ ಮೇಷ ತುಲಾಯನಗಳಲ್ಲಿ ಶಂಕು ಉತ್ತರಛಾಯೆ ಅಂಗುಳಾದಿ ೩-೩೬ ಇದರವರ್ಗ ೧೨-೫೭-೩೬ ಶಂಕುವರ್ಗ ೧೪೪ ಸಂಯೋಗ ೧೫೬-೫೭-೩೬ ಇದರಮೂಲ ೧೨-೩೧-೪೨ ಇದೆ ವಿಷುವತ್ಕರ್ಣವು ಶಂಕುಛಾಯಾಶಂಕ್ವಗ್ರಸಮಸೂತ್ರಗಳನ್ನು ಭುಜಕೋಟಿ ಕರ್ಣಗಳೆಂಬ ಈಮೂರು ಪ್ರಥಮತಃ ತಿಳಿಯಬೇಕು.

ಅಥ॥ ಕ್ರಾಂತಿಸಾಧನವು.

ಮೂ॥ ಸಾಯನಬಿಟಭುಜಜ್ಯಾತ್ರಿಘ್ನಾಲಿಪ್ತಾಸ್ಸ್ವಪಕ್ಷಿಪ್ತಾ ।
ಕ್ರಾಂತಿರ್ಲವಾದಿಕಾಸ್ಯಾತ್ಕ್ರಿಯಘಟಯೋಸ್ಸೌಮ್ಯಯಾಮ್ಯಾಖ್ಯಾ॥ ೪॥

ಟೀ॥ ಸಾಯನಗ್ರಹಕ್ಕೆ ಪೂರ್ವೋಕ್ತರೀತ್ಯಾ ಸಂಪಾದಿಸಲ್ಪಟ್ಟ ಭುಜಜ್ಯೆಯನ್ನು ೩ ರಿಂದ ಗುಣಿಸಿದ ಭಾಗಾದಿಯನ್ನ ಕಲಾದಿಯಲ್ಲಿ ಕಳದು ಸಿಂತದ್ದೇ ಕ್ರಾಂತಿ ಭಾಗಾದಿ ಯಾಗುವದು ಮೇಷಾದಿ ಉತ್ತರಕ್ರಾಂತಿ ತುಲಾದಿ ದಕ್ಷಿಣಕ್ರಾಂತಿಯೆಂದು ತಿಳಿಯುವದು.

ಉ ದಾ ಹ ರ ಣ.

ಭಾವಸಂವತ್ಸರ ವೈಶಾಖ ಶುಕ್ಲ ಪೂರ್ಣಿಮಾ ಶುಕ್ರವಾರ ಮಧ್ಯಾಹ್ನ ಸ್ಪಷ್ಟರವಿ ೦-೧೮-೫೮-೪೦ ಅಯನಾಂಶ ೨೧-೨೦-೦ ಸಾಯನರವಿ ೧-೧೦-೧೦-೪೦ ಭುಜಜ್ಯಾ ೫-೭-೪೬ ತ್ರಿಗುಣಿತ ಭುಜಜ್ಯೆ ೧೫-೨೩-೧೮ ಇದನ್ನು ಕಲಾದಿಸ್ಥಾನ

ವಲ್ಲಿ ಕಲಾದಿಯನ್ನಾಗಿ ಭಾವಿಸಿ ಕಳದ ಶೇಷ ೧೫-೭-೫೫ ಸಾಯನ ಸೂರ್ಯನು ಮೇಷಾ ಯಾದಕಾರಣ ಉತ್ತರಕ್ರಾಂತಿ ಭಾಗಾದಿಯಾಯಿತು.

ಅನ॥ ಅಕ್ಷಾಂಶನತಾಂಶಸಾಧನವು.

ಮೂ॥ ಪಂಚಹತಾಕ್ಷಭಾಯಾಭಾಕ್ತೃತಿದಶಾಂಶೋನಾಹ್ಯಕ್ಷಾಂಶಾಸ್ಯುಃ।
ಸೂರ್ಯಕ್ರಾಂತ್ಯಕ್ಷಾಂಶವಿಯೋಗೋಯೋಗೋದಿಗ್ವಶತೋಹಿನತಾಂಶಾಃ॥

ಟೀ॥ ಸ್ವದೇಶ ವಿಷುವಛಾಯೆಯನ್ನು ೫ ರಿಂದ ಗುಣಿಸಿ ವಿಷುವಛಾಯಾವರ್ಗದ ೧೦ನೆ ಅಂಶವನ್ನು ಕಳೆಯಲು ಅಕ್ಷಾಂಶವಾಗುವದು ಈಅಕ್ಷಾಂಶವನ್ನು ಸೂರ್ಯಕ್ರಾಂತಿ ಭಾಗಕ್ಕೆ ಏಕದಿಕ್ಕಾದರೆ ಕೂಡುವದು ಭಿನ್ನದಿಕ್ಕಾದರೆ ಕಳೆಯುವದು ಇದು ನತಾಂಶವಾಗುವದು.

ಉ ದಾ ಹ ರ ಣ.

ವಿಷುವಛಾಯೆ ೩-೩೬ ಪಂಚಗುಣಿತ ೧೮-೦-೦ ವಿಷುವಛಾಯಾವರ್ಗ ೧೨-೫೭-೩೬ ಇದರ ೧೦ನೆ ಅಂಶ ೧-೧೭-೪೫ ಪಂಚಗುಣಿತಾಕ್ಷ ಛಾಯೆಯಾದ ೧೮-೦-೦ಲ್ಲಿ ಶೋಧಿಸಿದ ಶೇಷ ೧೬-೪೨-೧೫ರ ವ್ಯುತ್ತರಕ್ರಾಂತಿ ೧೫-೭-೫೫ ಶೋಧಿಸಲು ದಕ್ಷಿಣ ನತಾಂಶವಾಯಿತು ೧-೩೪-೨೦.

ಅನ॥ ನತಕಾಲಸಾಧನೋಪಾಯವು.

ಮೂ॥ ದಿನಾರ್ಧಾದಿಕೇಷ್ಟಂನತಂ ಪಶ್ಚಿಮಾಖ್ಯಂ ದಿನಾರ್ಧೋಸಿತಂ ಪ್ರಾಙ್ನತಸದ್ಭಿರುಕ್ತಂ। ಅಥಸ್ವೋದಯೈರಿಷ್ಟಕಾಲಾದ್ವಿಲಗ್ನಂನತೇ ನಾಥಲಂಕೋದಯೈರ್ಮಧ್ಯಸಿದ್ಧಿಃ॥ ೬॥

ಟೀ॥ ದಿನಾರ್ಧ ಪ್ರಮಾಣವನ್ನು ಇಷ್ಟ ಕಾಲಘಳಿಗೆಗಳಲ್ಲಿ ಕಳೆದದ್ದು ಪಶ್ಚಿಮನತ ಇಷ್ಟಕಾಲ ಘಳಿಗೆಗಳು ದಿನಾರ್ಧದ ವೊಳಗೆ ಇದ್ದಾಗ ದಿನಾರ್ಧದಲ್ಲಿ ಕಳದ ಶೇಷವೇ ಪೂರ್ವನತ ರಾತ್ರಿಯಲ್ಲಿ ವಿಲೋಮವಾಗಿ ನೋಡುವದು ನತವನ್ನು ಮಧ್ಯಾಹ್ನದಲ್ಲಿ ಕಳದ ಶೇಷವೇ ಉನ್ನತವುಯೆಂದು ಚತುಷ್ಪಾಲಪಕ್ಷವು ಸ್ವದೇಶೋದಯ ಲಗ್ನಪ್ರಮಾಣದಿಂದಲೂ ಇಷ್ಟಕಾಲದಿಂದಲು ಲಗ್ನ ಸಾಧಿಸಬೇಕು, ದಶಮಲಗ್ನವನ್ನು ನತಕಾಲದಲ್ಲಿಲಂಕೋದಯದಿಂದ ಸಾಧಿಸಬೇಕು.

ಉ ದಾ ಹ ರ ಣ.

ಇಷ್ಟಕಾಲ ೮-೧೭ ದಿನಾರ್ಧ ೧೫-೪೭ ರಲ್ಲಿ ಇಷ್ಟಕಾಲ ಕಳೆಯಲು ಶೇಷವೇ ಪೂರ್ವನತ ೭-೩೦.

ಅನ॥ ಲಂಕಾಲಗ್ನಪ್ರಮಾಣ ಸ್ವದೇಶಲಗ್ನಪ್ರಮಾಣವು.

ಮೂ॥ ಲಂಕೋದಯಾಸ್ಸ್ವರ್ಗಜಸಪ್ತಪಕ್ಷ ಪ್ರಹಾಂತಪಕ್ಷಾಗುಣಪಕ್ಷರಾಮಯೋಮೇಷತ್ರಿಕೇತಾವಿಕಲಾವಿಲೋಮಂಕರ್ಕ್ಯಾದಿಕೇನ್ಯತ್ರತತೋವಿಲೋಮಂ॥೭॥

ತ್ರಿಜಾದಿಷ್ವೂನಾನಿ ಚರಾರ್ಧಕಾನಿ ಕ್ರಮೇಣ ಕರ್ಕ್ಯಾದಿಷು ಯೋಜಿತಾನಿ ।
ಮೇಷಾದಿಲಗ್ನಪ್ರಮಿತಿಃ ಸ್ವದೇಶೇ ಜೂಕಾದಿಕಾನಾಂ ತು ವಿಪರ್ಯಯೇಣ ॥ ೮ ॥

ಟೀ॥ ಲಂಕಾಲಗ್ನ ಪ್ರಮಾಣಗಳಿಗೆ ಮೇಷಾದಿ ತ್ರಯಕ್ಕೆ ಕ್ರಮವಾಗಿ ಆದಿ ಮಧ್ಯಾಂತ ಚರಾರ್ಧವನ್ನು ಕಳೆಯುವದು ಕಟಕಾದಿರಾಶಿ ತ್ರಯಕ್ಕೆ ಕ್ರಮವಾಗಿ ಅಂತ್ಯ ಮಧ್ಯ ಆದಿ ಚರಾರ್ಧವನ್ನು ಕೂಡುವದು ತುಲಾದಿಯಾಗಿ ವ್ಯತ್ಯಸ್ತವಾಗಿ ತಿಳಿಯುವದು.

ಉದಾಹರಣ.

| ಲಗ್ನಗಳು | ಲಂಕೆಗೆ. | ಕುಂಡಿನೀನಗರಕ್ಕೆ. | ಕರ್ನಾಟದೇಶಕ್ಕೆ. |
|---|---|---|---|
| ಮೀನಮೇಷ | ೨೭೮ | ೨೪೨ | ೨೪೮ |
| ವೃಷಭ ಕುಂಭ | ೨೯೯ | ೨೭೦ | ೨೭೫ |
| ಮಿಥುನ ಮಕರ | ೩೨೩ | ೩೧೧ | ೩೧೩ |
| ಕಟಕ ಧನುಸ್ಸು | ೩೨೩ | ೩೩೪ | ೩೩೩ |
| ಸಿಂಹ ವೃಶ್ಚಿಕ | ೨೯೯ | ೩೨೮ | ೩೨೩ |
| ಕನ್ಯಾ ತುಲಾ | ೨೭೮ | ೩೧೪ | ೩೦೮ |

ಅಥ॥ ಲಗ್ನಸಾಧನೋಪಾಯವು.

ಮೂ॥ ಸಾಯನಭಾನೋರ್ಭೋಗ್ಯಲವಾಸ್ತತ್ಸ್ವೋದಯಸಿಘ್ನಾಃ ಖಗುಣವಿಭಕ್ತಾಃ ।
ಇಷ್ಟಕಲಾಸುತ್ಯಕ್ತ್ವಾಶ್ಶೇಷೇಗಮ್ಯಾನ್ಸ್ವೋದಯಾನ್ಕ್ಷಿಪೇಚ್ಛಿಷ್ಟಂ ॥ ೯ ॥
ಖಗುಣಹತಂತ್ವವಿಶುದ್ಧೋದಯಹೃಲ್ಲವಯುಗ್ಗತರಾಶಿಗಣೋಲಗ್ನಂ ।
ನಿರಯನಮೇತತ್ಸ್ಯಾದ್ದಿನರಾತ್ರ್ಯೋಸ್ತ್ವರ್ಕಾದ್ಭಸರಾಶಿಯುತಾತ್ಸಾಧ್ಯಂ ॥ ೧೦ ॥

ಟೀ॥ ಸಾಯನರವಿಯ ಭೋಗ್ಯಭಾಗಾದಿಯನ್ನು ಸ್ವದೇಶ ಉದಯ ಲಗ್ನ ಪ್ರಮಾಣದಿಂದ ಗುಣಿಸಿ ಯಥಾವಿಧಿಯಾಗಿ ಸವರ್ಣಿಸಿ ಸ್ಥಾನಕ್ಕೆ ತಂದುದು ಭೋಗ್ಯ ವಿಘಳಿಗೆಗಳು ಈವಿಘಳಿಗೆಗಳನ್ನು ಇಷ್ಟಕಾಲಘಳಿಗೆ ವಿಘಳಿಗೆಗಳಲ್ಲಿ ಶೋಧಿಸುವದು, ಭೋಗ್ಯಕಾಲಕ್ಕಿಂತಲು ಇಷ್ಟಕಾಲ ಅಲ್ಪವಾದರೆ ಇಷ್ಟಕಾಲವನ್ನು ೩೦ ರಿಂದ ಗುಣಿಸಿ ಉದಯಲಗ್ನದಿಂದಾ ಭಾಗಿಸಿ ಭಾಗಾದಿಫಲವನ್ನು ಸಾಯನರವಿಯ ಭಾಗಾದಿಯನ್ನು ಬಿಟ್ಟು ರಾಶಿ ಕೆಳಗೆ ಬರೆಯಲು ಸಾಯನಲಗ್ನವಾಗುವದು, ಭೋಗ್ಯವಿಘಳಿಗೆಗಳು ಇಷ್ಟಕಾಲದಲ್ಲಿ ಶೋಧಿಸಿದರೆ ಸಾಯನರವಿಯ ರಾಶಿಸ್ಥಾನಕ್ಕೆ ೧ ಕೂಡುವದು ಮತ್ತು ಎಷ್ಟು ಲಗ್ನಪ್ರಮಾಣಗಳು ಕಳೆಯಬಹುದೊ ಅಷ್ಟು ಕಳೆದು ಅಷ್ಟು ಸಂಖ್ಯೆಯನ್ನು ಸಾಯನರವಿಯ ರಾಶಿಯಲ್ಲಿ ಕೂಡುವದು, ಯಾವ ಲಗ್ನಪ್ರಮಾಣ ಕಳೆಯುವುದಕ್ಕೆ ನಿಲ್ಲುವದೊ ಆವಾಗ ಶೇಷ ವಿಘಳಿಗೆಗಳನ್ನು ೩೦ ರಿಂದ ಗುಣಿಸಿ ಕಳೆಯದೆ ಇರುವ ಲಗ್ನಪ್ರಮಾಣ

ದಿಂದ ಭಾಗಾದಿಯನ್ನು ಸಾಧಿಸಿ ಸಾಯನರವಿಯ ಭಾಗಾದಿಬಿಟ್ಟು ರಾಶಿಯಲ್ಲಿ ಸೇರಿಸಿದರೆ ಸಾಯನ ಲಗ್ನವಾಗುವದು, ಅಯನಾಂಶವನ್ನು ಕಳದರೆ ತತ್ಕಾಲ ಶುದ್ಧ ಲಗ್ನವಾಗುವದು, ರಾತ್ರಿಕಾಲದಲ್ಲಿ ೬ ರಾಶಿ ಕೂಡಿದ ಸಾಯನ ರವಿಯಿಂದ ಲಗ್ನ ಸಾಧಿಸಬೇಕು.

ಉ ದಾ ಹ ರ ಣ.

ವೈಶಾಖ ಶುಕ್ಲ ಪೂರ್ಣಿಮ ಇಷ್ಟಕಾಲ ೧೦-೩೫ ತಾತ್ಕಾಲಸ್ಫುಟ ರವಿ ೦-೧೮-೪೫-೩೮ ಗತಿ ೫೮-೮ ಅಯನಾಂಶ ೨೧-೨೦-೦ ಸಾಯನರವಿ ೧-೯-೪೫-೩೮ ಭೋಗ್ಯ ಭಾಗಾದಿ ೨೦-೧೪-೨೨ ಈಭಾಗಾದಿಯನ್ನು ಸ್ವದೇಶ ವೃಷಭ ಲಗ್ನ ಪ್ರಮಾಣದಿಂದ ಗುಣಿಸಿ ಸವರ್ಣಿಸಿ ೩೦ ರಿಂದ ಭಾಗಿಸಿ ಬಂದ ರಾಶಿಸ್ಥಾನ ವಿಘುಳಿಗೆಗಳು ೧೮೨ ಇಷ್ಟಕಾಲ ವಿಘುಳಿಗೆ ೬೩೫ ರಲ್ಲಿ ಕಳದ ಶೇಷ ೪೫೨-೫೧ ಇದರಲ್ಲಿ ಮಿಥುನ ಪ್ರಮಾಣ ಕಳದ ಶೇಷ ೧೪೧-೫೧ ಕಟಕ ಪ್ರಮಾಣ ಹೋಗುವದಿಲ್ಲವಾದ್ದರಿಂದ ಇದನ್ನು ೩೦ ರಿಂದ ಗುಣಿಸಿ ಕಟಕಪ್ರಮಾಣದಿಂದ ಭಾಗಿಸಿ ಬಂದ ಭಾಗಾದಿ ೧೨-೪೨-೧೦ ಮಿಥುನರಾಶಿ ಪರ್ಯಂತರವು ಕಳದದ್ದರಿಂದ ರಾಶಿಸ್ಥಾನದಲ್ಲಿ ೩ನ್ನು ಬರೆಯಲು ರಾಶ್ಯಾದಿ ಸಾಯನಲಗ್ನ ೩-೧೨-೪೨-೧೦ ಅಯನಾಂಶ ಕಳಯಲು ಶುದ್ಧಲಗ್ನವು ೨-೨೧-೨೨-೧೦.

ಅವ॥ ನತಕಾಲಘಟಿಯಾಸಾಧನಕ್ಕೆ ಮಧ್ಯಹಾರಕವು.

ಮು ರಾ॥ ಬಾಣಕೃತಚರವಿನಾಡ್ಯೋಮನುಚಂದ್ರಯೋಜಿತಾವಿಯುಕ್ತಾಶ್ಚ ।
ಉತ್ತರದಕ್ಷಿಣಚರತೋಹಾರಕಮೇತದ್ವಿಸಿಸ್ಥಿತಂಮಧ್ಯಂ॥ ೧೧॥

ಟೀ ॥ ಇಷ್ಟದಿನಕ್ಕೆ ಪೂರ್ವಾಧ್ಯಾಯೋಕ್ತರೀತ್ಯಾಚರ ಘುಳಿಗೆಗಳನ್ನು ಸಾಧಿಸಿ ೫ ರಿಂದ ಭಾಗಿಸಿದ ಲಬ್ಧವು ಉತ್ತರ ಚರವಾದರೆ ೧೧೪ ರಲ್ಲಿ ಕೂಡುವದು ದಕ್ಷಿಣ ಚರವಾದರೆ ಕಳಯುವದು ಹೀಗೆ ಮಾಡಲು ಮಧ್ಯ ಹಾರಕ ವಾಗುವದು.

ಉ ದಾ ಹ ರ ಣ.

ಸ್ಫುಟ ರವಿ ೦-೧೮-೪೫-೩೮ ಸಾಯನರವಿ ೧-೯-೪೫-೩೮ ಉತ್ತರ ಚರ ವಿಘುಳಿಗೆ ೪೫ ಇದನ್ನು ೫ ರಿಂದ ಭಾಗಿಸಿ ಬಂದ ಫಲ ೯ ಇದನ್ನು ೧೧೪ಲ್ಲಿ ಕೂಡಲು ೧೨೩ ಮಧ್ಯಹಾರಕವಾಯಿತು.

ಅವ ॥ ಅಭಿಮತಹಾರಕಸ್ಫುಟೀಕರಣವು.

ಮು ರಾ॥ ತ್ರಿಂಶದ್ವಿಕಲಾಯುತನವರಾಗ್ರಧ್ಂಪ್ರೋಚ್ಯತೇಸಮಾಖ್ಯೈತಿ ।
ಸಾರ್ಧತ್ರಯೋದಶಾಧಿಕನಕಭಾಗಚತುರ್ಗುಣೋನಿತಾವ್ಯಕ್ತಾ॥ ೧೨ ॥
ಪ್ರಸ್ಫುಟಸ್ವಮಾಖ್ಯಯೋಸೋಮಧ್ಯಹರಸ್ತ್ರಿಪಕ್ಷಕರ್ಣಸಂಭಕ್ತಃ ।
ಲಬ್ಧಃ ಸ್ಫುಟಹಾರಕಮಿತಿಮಂತವ್ಯಂಸ್ವೇಷ್ಟಭಾಸಿದ್ಧ್ಯೈ॥ ೧೩॥

ಟೀ॥ ನತಘಳಿಗೆಯಲ್ಲಿ ಅರ್ಧಘಳಿಗೆಯೊಡ ೩೦ ವಿಘಳಿಗೆಯನ್ನು ಕೂಡಿ ವರ್ಗವನ್ನು ಮಾಡಿ ಅದರ ಅರ್ಧವೆ ಸಮಾಖ್ಯವು, ಈಸಮಾಖ್ಯೆಯು ೧೩-೩೦ ಘಳಿಗೆಗಿಂತಲೂ ನತಘಳಿಗೆ ಕಮ್ಮಿಯಾದಾಗ ಅವೆಸ್ಫುಟ ಅಭಿಮತ ಹಾರಕವು; ೧೩-೩೦ ಘಳಿಗೆಗಿಂತಲು ಅಧಿಕವಾದಾಗ ೧೩-೩೦ ಘಳಿಗೆಯಲ್ಲಿ ಶೋಧಿಶಿದ ಶೇಷವನ್ನು ೪ ರಿಂದ ಗುಣಿಶಿ ಸಮಾಖ್ಯೆಯಲ್ಲಿ ಶೋಧಿಸಲು ಸ್ಫುಟವಾಗುವದು ಈ ಸ್ಫುಟ ಸಮಾಖ್ಯೆಯನ್ನು ಮಧ್ಯಹಾರಕದಲ್ಲಿ ಶೋಧಿಶಿ ಅಕ್ಷಕರ್ಣದಿಂದ ಭಾಗಿಶಿ ಬಂದ ಫಲವೇ ಸ್ಫುಟ ಅಭಿಮತ ಹಾರಕವಾಗುವದು.

ಉದಾಹರಣ.

ಪೂರ್ವನತ ೭-೩೦ ಅರ್ಧಘಳಿಗೆ ೦-೩೦ ಕೂಡಲು ೮-೦ ಇದರವರ್ಗ ೬೪ ಇದರರ್ಧ ೩೨ ಇದೆ ಸಮಾಖ್ಯವು, ಇದನ್ನು ಮಧ್ಯಹಾರಕವಾದ ೧೨೩ಲ್ಲಿ ಕಳದ ಶೇಷ ೯೧ ಇದಂ ಅಕ್ಷಕರ್ಣದಿಂದ ೧೨-೩೧-೪೨ ಭಾಗಿಶಿಬಂದ ಸ್ಫುಟ ಹಾರಕವು ೭-೧೫.

ಅನ್ಯ॥ ಉದಾಹರಣವು.

ಪೂರ್ವನತ ೧೪-೩೦ ಅರ್ಧ ಘಳಿಗೆ ಕೂಡಲು ೧೫-೦ ಇದರವರ್ಗ ೨೨೫ ಇದರರ್ಧವಾದ ಮಧ್ಯ ಸಮಾಖ್ಯೆ ೧೧೨-೩೦ ನತ ೧೪-೩೦ ಇದನ್ನು ೧೩-೩೦ರಲ್ಲಿ ಕಳದ ಶೇಷ ೧-೦ ಇದ ೪ ರಿಂದ ಗುಣಿಶಿದ್ದು ೪ ಇದು ಮಧ್ಯ ಸಮಾಖ್ಯೆ ೧೧೨-೩೦ ಕಳದು ಶೇಷ ೧೦೮-೩೦ ಈಸ್ಫುಟ ಸಮಾಖ್ಯೆಯಂ ಮಧ್ಯಹಾರಕ ೧೨೩ಲ್ಲಿ ಕಳದ ಶೇಷ ೧೪-೩೦ ಅಕ್ಷಕರ್ಣದಿಂ ಭಾಗಿಶಿ ಬಂದಸ್ಫುಟಹಾರಕವು ೧-೯.

ಅವ॥ ಇಷ್ಟಕರ್ಣ ಸಾಧನೋಪಾಯವು.

ಮಾ॥ ದಶಘ್ನಾಕ್ಷ ಭಾಪ್ತಂಚರಂ ತಸ್ಯವರ್ಗೋ ನಿತಾದ್ವಿ ನಿಘ್ನಸ್ವಬಾಣಾಂಶಮು
ಸ್ತ್ವೀಂದುಯುಕ್ತಃ । ಭವೇದ್ಭಾಜ್ಯರಾಶಿರ್ವಿಭಕ್ತೋ ಹರೇಣಸ್ಫುಟೇನಾಥ ಲಬ್ಧಂ
ಭವೇದಿಷ್ಟಕರ್ಣಃ ॥ ೧೪॥

ಟೀ॥ ವಿಷುವಛಾಯೆಯನ್ನು ೧೦ ರಿಂದ ಗುಣಿಶಿ ಚರವಿಘಳಿಗೆಯನ್ನು ಭಾಗಿಶಿ ಬಂದ ಲಬ್ಧವಂ ವರ್ಗಮಾಡಿ ದ್ವಿಗುಣಿಶಿ ಇದರ ಪಂಚಮಾಂಶವನ್ನು ಇದರಲ್ಲಿ ಕೂಡಿ ೧೧೪ನ್ನು ಕೂಡಲು ಭಾಜ್ಯವಾಗುವದು, ಈಭಾಜ್ಯವನ್ನು ಸ್ಫುಟ ಹಾರಕದಿಂದ ಭಾಗಿಸಲು ಇಷ್ಟ ಕರ್ಣವಾಗುವದು.

ಉದಾಹರಣ

ವಿಷುವಛಾಯೆ ೩-೩೬ ದಶಗುಣಿತ ೩೬-೦ ಇದರಿಂದ ಚರವಿಘಳಿಗೆ ೪೫ನ್ನು ಭಾಗಿಶಿ ಬಂದ ಲಬ್ಧ ೧-೧೫ ಇದರವರ್ಗ ೧-೩೪-೩೫ ಇದನ್ನು ದ್ವಿಗುಣಿಶಿದ್ದು ೩-೯-೧೦ ಇದರ ಪಂಚಮಾಂಶ ೦-೩೭-೫೦ ದ್ವಿಗುಣಿತವರ್ಗ (೩-೯-೧೦) ಈ

ಯೆರಡು ಯೋಗಮಾಡಲು ೩-೪೬-೫೪ ಇದಂ ೧೧೪ ರಲ್ಲಿ ಕೂಡಿದ ಭಾಜ್ಯರಾಶಿ ೧೧೭-೪೬-೫೪ ಇದನ್ನು ಸ್ಫುಟಾಭಿಮತ ಹಾರಕದಿಂದ ೭-೧೫ ಭಾಗಿಶಿದ ಇಷ್ಟ ಕರ್ಣ ೧೬-೧೪.

ಅನ್ಯ || ಉದಾಹರಣ.

ಪೂರ್ವೋಕ್ತ ಭಾಜ್ಯರಾಶಿ ೧೧೭-೪೬-೫೪ ಅಭಿಮತಹಾರಕ ೧-೯ ಇಷ್ಟ ಕರ್ಣ ೧೦೭-೨೬.

ಅವ|| ಇಷ್ಟಛಾಯೋಜ್ಞಾನೋಪಾಯವು.

ಮೂ|| ಇಷ್ಟಕರ್ಣಕೃತಿಶಂಕುವರ್ಗಯೋರಂತರಸ್ಯಪದಮಿಷ್ಟಭಾಭವೇತ್ ।
ಪೂರ್ವಪಶ್ಚಿಮಕಪಾಲಯೊರಿಯಂಹ್ರಾಸವೃದ್ಧಿವಶತೊನತೆಸಮಾ|| ೧೫||

ಟೀ|| ಇಷ್ಟಕರ್ಣವರ್ಗಕ್ಕು ಶಂಕುವರ್ಗಕ್ಕು ಉಳ್ಳ ಅಂತರದ ಮೂಲವೇ ಇಷ್ಟಛಾಯೆಯಾಗುವದು, ಪೂರ್ವನತವಾದರೆ ಛಾಯೆ ಕಮ್ಮಿಯಾಗುತ್ತಲು ಪಶ್ಚಿಮನತವಾದರೆ ಕ್ರಮವಾಗಿ ಛಾಯೆ ವೃದ್ಧಿಯಾಗುತ್ತಲು ಇರುವದು.

ಉ ದಾ ಹ ರ ಣ.

ಇಷ್ಟಕರ್ಣ ೧೬-೧೪ ಇದರವರ್ಗ ೨೬೩-೩೧-೧೬ ಶಂಕುವರ್ಗ ೧೪೪ ಅಂತರ ೧೧೯-೩೧-೧೬ ಇದರಮೂಲ ೧೦-೫೫-೫೬ ಇದೆ ಇಷ್ಟ ಛಾಯಾಂಗುಳಾದಿ.

ಅನ್ಯ || ಉದಾಹರಣ.

ಇಷ್ಟಕರ್ಣ ೧೦೭-೨೬ ಇದರವರ್ಗ ೧೧೪೯೭-೩೫-೦ ಶಂಕುವರ್ಗ ೧೧೪ ಅಂತರ ೧೧೩೪೪-೩೫ ಮೂಲ ೧೦೧-೪೩ ಇಷ್ಟಛಾಯೆ.

ಅವ|| ಛಾಯೆಯಿಂದ ನತಘಟಿಕಾ ಜ್ಞಾನೋಪಾಯವು.

ಮೂ|| ಭಾಶಂಕುವರ್ಗೈಕ್ಯಪದಂಶ್ರುತಿಸ್ಯಾತ್ತದ್ಭಕ್ತಭಾಜ್ಯೋಭಿಮತಾಖ್ಯಹಾರಃ।
ತದಕ್ಷಕರ್ಣೈನಚಗುಣ್ಯಮಧ್ಯಹಾರೆವಿಶೋಧ್ಯಂದ್ವಿಗುಣೀಕೃತಂಚ|| ೧೬||
ವೇದಾಂಕಭೂಮಿ ರಧಿಕಂ ಚಯತ್ಪೃಥಗ್ವೇದಾಂಕಭೂನಸ್ತ್ರಿ ಭಿರಾಪ್ತ ಯುಕ್ತಂ । ತನ್ಮೂಲಸಂಶೋಧಿತ ಮುರ್ಧ್ವನಾಡೀಭವೆನ್ನತಂ ಪ್ರಾಗಪರೇಕಪಾಲತಃ|| ೧೭||

ಇತಿ ಶ್ರೀಮಚ್ಛುಭಂಕರ ಭಾರತೀಂದ್ರ ವಿರಚಿತೇ ಖಚರದರ್ಪಣೆ
ಉಪಕರಣಾಧ್ಯಾಯ ಶ್ಚತುರ್ಥ

ಟೀ|| ಅಕ್ಷಛಾಯಾವರ್ಗ ಶಂಕುವರ್ಗಗಳ ಯೋಗದ ಮೂಲವೆ ಇಷ್ಟಕರ್ಣವು. ಈ ಇಷ್ಟಕರ್ಣದಿಂದ ಪೂರ್ವೋಕ್ತ ಭಾಜ್ಯವನ್ನು ಭಾಗಿಸಿ ಬಂದ ಲಬ್ಧವೆ ಇಷ್ಟಹಾರಕವು. ಇದನ್ನು ಅಕ್ಷಕರ್ಣದಿಂದ ಗುಣಿಶಿ ಮಧ್ಯಹಾರಕದಲ್ಲಿ ಶೋಧಿಸಲು

ಸಿಂತ ಶೇಷ ಸಪರಾಖ್ಯವೆಂದು ಹೆಸರಾಗುವದು. ಇದನ್ನು ದ್ವಿಗುಣಿಸಿ ೧೯೪ ಕಿಂತ ಕಡಿಮೆಯಾದರೆ ಅದನ್ನೆ ಇಟ್ಟುಕೊಳ್ಳಬೇಕು. ೧೯೪ ಕ್ಕಿಂತಲು ಅಧಿಕವಾದಾಗ ೨ ಪ್ರತಿಯನ್ನಿಟ್ಟು ಒಂದು ಪ್ರತಿಯಲ್ಲಿ ೧೯೪ ಕಳೆದ ಶೇಷವನ್ನು ೩ ರಿಂದ ಭಾಗಿಸಿಬಂದ ಲಬ್ಧವನ್ನು ಮತ್ತೊಂದು ಪ್ರತಿಯಲ್ಲಿ ಕೂಡಿ ಇದಕ್ಕೆ ಮೂಲಮಾಡಿ ಅದರಲ್ಲಿ ಅರ್ಧಘಳಿಗೆಯಾದ ೩೦ ವಿಘಳಿಗೆ ಕಳೆಯಲು ನತಘಳಿಗೆ ಯಾಗುವದು ಈನತಘಳಿಗೆಯಿಂದ ಇಷ್ಟ ಘಟಿಕೆಯನ್ನು ಪೂರ್ವೋಕ್ತರೀತ್ಯಾ ಸಾಧಿಸಬಹುದು.

ಉ ದಾ ಹ ರ ಣ.

ಇಷ್ಟಛಾಯೆ ೧೦-೫೫-೫೬ ಇದರವರ್ಗ ೧೧೯-೩೧-೧೬ ಶಂಕುವರ್ಗ ೧೪೪ ಇವೆರಡುನ್ನೂ ಸಂಯೋಗಮಾಡಲು ೨೬೩-೩೧-೧೬ ಇದರಮೂಲ ೧೬-೧೪ ಇದೆ ಇಷ್ಟಕರ್ಣವಾಯಿತು ಪೂರ್ವೋಕ್ತಭಾಜ್ಯರಾಶಿ ೧೧೭-೪೬-೪೮ ಇದನ್ನು ಇಷ್ಟಕರ್ಣದಿಂದ ಭಾಗಿಶಿಲಬ್ಧ ೭-೧೪ ಇಷ್ಟಹಾರಕವಾಯಿತು ಇದನ್ನು ಅಕ್ಷಕರ್ಣದಿಂದ ಗುಣಿಸಲು ೯೦-೩೯-೨೮ ಇದನ್ನು ಮಧ್ಯಹಾರಕದಿಂದ ೧೨೩ ಕಳೆದ ಶೇಷ ೩೨-೨೦ ಇದು ದ್ವಿಗುಣಮಾಡಲು ೬೪-೪೦ ಇದರಮೂಲ ೮-೨ ಇದರಲ್ಲಿ ೩೦ ವಿಘಳಿಗೆ ಕಳೆಯಲು ಪೂರ್ವನತ ೭-೩೨ ಇದನ್ನು ಮಧ್ಯಾಹ್ನ ಪ್ರಮಾಣ ೧೫-೪೭ ರಲ್ಲಿ ಕಳೆಯಲು ಇಷ್ಟಘಳಿಗೆ ೮-೧೫.

ಅನ್ಯಉದಾಹರಣ.

ಇಷ್ಟಛಾಯೆ ೧೧೧-೪೩ ವರ್ಗ ೧೦೩೪೮-೩೫ ಶಂಕುವರ್ಗ ೧೪೪ ಈ ಯೆರಡರ ಯೋಗ ೧೦೪೯೨-೩೫ ಮೂಲ ೧೦೨-೨೫ ಇದೆ ಇಷ್ಟಕರ್ಣವು ಪೂರ್ವೋಕ್ತಭಾಜ್ಯ ೧೧೭-೪೬-೪೮ ಇಷ್ಟಕರ್ಣದಿಂದ ಭಾಗಿಸಲು ಇಷ್ಟಹಾರಕ ೧-೯ ಇದಂ ಅಕ್ಷಕರ್ಣದಿಂದ ಗುಣಿಸಲು ೧೩-೫೪-೧೮ ಇದನ್ನು ಮಧ್ಯಹಾರಕ ೧೨೩ ರಲ್ಲಿ ಶೋಧಿತ ಶೇಷ ೧೦೯-೫-೪೨ ದ್ವಿಗುಣಿತ ೨೧೮-೧೧-೨೪ ಇದನ್ನು ಯೆರಡು ಪ್ರತಿಯನ್ನಿರಿಶಿ ೨೧೮-೧೧-೨೪ ಒಂದು ಪ್ರತಿಯಲ್ಲಿ ೧೯೪ ಶೋಧಿತ ಶೇಷ ೨೪-೧೧-೨೪ ಇದನ್ನು ೩ ರಿಂಡ ಭಾಗಿಶಿದ ಲಬ್ಧ ೮-೩-೨೮ ಇದನ್ನು ಮತ್ತೊಂದು ಪ್ರತಿಯಲ್ಲಿ ಕೂಡಲು ೨೨೬-೧೪-೫೨ ಇದರಮೂಲ ೧೫-೨ ಇದರಲ್ಲಿ ೦-೩೦ ಘಳಿಗೆ ಕಳಿಯಲು ೧೪-೩೨ ಈಪೂರ್ವನತವನ್ನು ಮಧ್ಯಾಹ್ನ ಪ್ರಮಾಣ ೧೫-೪೭ ರಲ್ಲಿ ಕಳಿಯಲು ಇಷ್ಟಕಾಲ ೧-೧೪.

ಇಂತು ಖಚರದರ್ಪಣದ ಭಾವಬೋಧಿನೀ ಯೆಂಬ ಕನ್ನಡ ಟೀಕಿನೊಳ್ ಉಪಕರಣಾಧ್ಯಾಯವು ಮುಗಿದುದು.



ಶ್ರೀ

# ಚಂದ್ರಗ್ರಹಣಾಧಿಕಾರ ಪ್ರಾರಂಭಃ.



ಅವ॥ ಅದ್ವೈತಸ್ವರೂಪವಾದ ಪರಬ್ರಹ್ಮಸ್ವರೂಪವನ್ನು ತಮ್ಮಲ್ಲಿ ಐಕ್ಯವಾಗಿ ಭಾವಿಸುತ್ತಾರೆ.

ಮೂ॥ ದೃಷ್ಟಭ್ರಮಾದ್ಯಥಾರ್ಕೇಂದ್ವೋರುಪರಾಗಸ್ತಥಾ ಜಗತ್ ।
ಆತ್ಮನ್ಯಾರೋಪ್ಯತೇ ತಸ್ಯ ಶುದ್ಧಸ್ಯೈಕ್ಯೇತರಾನ್ವಯಃ ॥ ೧॥

ಟೀ॥ ಸೂರ್ಯ ಚಂದ್ರರಿಗೆ ರಾಹುಗ್ರಸ್ತವು ಗ್ರಹಣವೆಂಬುವದು ದೃಷ್ಟಭ್ರಮೆಯು. ಚಂದ್ರಪಾತಕ್ಕೆ ರಾಹುವೆಂಬದಾಗಿ ಸಂಕೇತ ವಿರುವದರಿಂದ ರಾಹುಗ್ರಸ್ತವೆಂದು ಪ್ರಸಿದ್ಧಿಯಾಗಿರುವ ಕಾರಣ ರಾಹುಗ್ರಸ್ತವೆ ಉಪರಾಗವೆಂಬದಾಗಿ ಭ್ರಮೆ ಯುಂಟಾಗುವದು, ಆದರೆ ಪೂರ್ಣಿಮೆಯಲ್ಲಿ ಭೂಗೋಳವು ಸೂರ್ಯ ಚಂದ್ರ ಮಧ್ಯವರ್ತಿಯಾಗಿ ಸೂರ್ಯಕಿರಣದಿಂದಾ ಪ್ರಕಾಶಿಸುತ್ತಿರುವ ಚಂದ್ರಗೋಳಕ್ಕೆ ಭೂಮ್ಯಭಿಮುಖವಾಗುವದರಿಂದ ಭೂಛಾಯೆಯೇ ಚಂದ್ರನನ್ನು ಮರೆಮಾಡುತ್ತದೆ. ಅಮಾವಾಸ್ಯೆಯಲ್ಲಿಯು ಸೂರ್ಯಗೋಳಕ್ಕು ಭೂಗೋಳಕ್ಕು ಚಂದ್ರನು ಮಧ್ಯವರ್ತಿಯಾಗಿ "ಮೇಘಾವರಣವಾದರೆ ಹ್ಯಾಗೆ ಕಾಣುವದಿಲ್ಲವೊ ಹಾಗೆ" ಸೂರ್ಯನನ್ನು ಮರೆಮಾಡುತ್ತದೆ (ಸೂರ್ಯ ಸಿದ್ಧಾಂತದಲ್ಲಿ) (ಛಾದಕೋ ಭಾಸ್ಕರಸ್ಯೇಂದು ರ್ಭೂಛಾಯಾಛಾದಕೋವಿಧುಃ) ವೇದಾಂತಶಾಸ್ತ್ರದಲ್ಲಿ 'ರಾಹುಗ್ರಸ್ತದಿವಾಕರೇಂದು ಸದೃಶೋಮಾಯಾಸಮಾಛಾದಿತ" ಆದ್ದರಿಂದ ಸೂರ್ಯನಿಗೆ ಸಾರ್ವಕಾಲವು ಸ್ವಪ್ರಕಾಶತ್ವವು ಹ್ಯಾಗೆ ಸಿದ್ಧಿಸಲ್ಪಡುವದೋ ಹಾಗೆ ಪರಮೋತ್ಕೃಷ್ಟವಾಗಿ ಸಕಲ ಮಾಯೆಯಿಂದ ಅತೀತವಾಗಿ ಯಾವದಕ್ಕೂ ಸಮ್ಮಂದಿಸದೆ ಸ್ವಪ್ರಕಾಶದಿಂದಲೆ ಪ್ರಕಾಶಮಾನವಾದಂಥಾ ಪರಬ್ರಹ್ಮಸ್ವರೂಪವ್ಯಾವದೋ ಅಂಥಾ ಸ್ವರೂಪವೇ ನನ್ನಲ್ಲಿ ಐಕ್ಯವನ್ನಾಗಿ ಭಾವಿಸುತ್ತೇನೆ.

ಅವ॥ ಗ್ರಹಣಾದಿಗಳಿಗೆ ದೃಗ್ಗೋಚರಾರ್ಥವಾಗಿ ದೃಕ್ಸಂಸ್ಕಾರವು ಹೇಳಲ್ಪಡುತ್ತೆ.

ಮೂ॥ ಕಲಿಗತವರ್ಷಾಃ ಪುಷ್ಕರಗಗನಶರೈರ್ಭಾಜಿತಾತ್ಫಲಂ ತು ಕಲಾಃ ।
ವಿಕಲಾಶ್ಚ ತಾಸ್ತು ಸೂರ್ಯೇ ಯೋಜ್ಯಾಸ್ಯುರ್ದೃಷ್ಟಿಗೋಚರಾಯೈವ ॥ ೨॥
ಖದ್ವಯರಂಧ್ರವಿಭಕ್ತಾತ್ಕಲಿವರ್ಷಾಃ ಪ್ರಾಪ್ತಭಾಗಲಿಪ್ತಾದ್ಯಾಃ ।
ಚಂದ್ರೋಚ್ಚಸ್ಯ ವಿಯೋಜ್ಯಾಂ ದೃಕ್ಕರ್ಮಾಪೇಕ್ಷಿತನದ್ಯೈವ ವಿದಾ ॥ ೩॥

ರಾಹೋಃಕಲ್ಯಾದ್ಯಬ್ದಾಃಖಖಿತರ್ಕೈಂದ್ವಕ್ಷೈರ್ಭಾಜಿತೇನಫಲಂ।
ವಿಕಲಾತ್ಮಕಂವಿಯೋಜ್ಯಂಹಿಮಕರಶರಸಾಧನಸ್ಯೋಹಿತಮಖಿಲೈಃ॥ ೪॥

ಟೀ॥ ಗತಕಲ್ಯಬ್ದವನ್ನು ೫೦೦ ರಿಂದ ಭಾಗಿಸಲು ಬಂದ ಲಬ್ಧ ಕಲಿ ಶೇಷ ವನ್ನು ೬೦ರಿಂದ ಗುಣಿಸಿ ೫೦೦ರಿಂದ ಭಾಗಿಸಿದಲಬ್ಧವೆ ಈಕಲಿ ವಿಕಲೆಯನ್ನು ಸೂರ್ಯ ಮಧ್ಯದಲ್ಲಿ ಕೂಡುವದು, ಗತಕಲ್ಯಬ್ದವನ್ನು ೯೦೦ರಿಂದ ಭಾಗಿಸಿಬಂದ ಭಾಗಾದಿ ಫಲವನ್ನು ಚಂದ್ರೋಚ್ಚ ಮಧ್ಯದಲ್ಲಿ ಕಳೆಯುವದು, ಗತಕಲ್ಯಬ್ದವನ್ನು ೧೧೬೦೦ ರಿಂದ ಭಾಗಿಸಿ ಬಂದ ವಿಕಲೆಯನ್ನು ರಾಹು ನಾಮಕವಾದಂಥಾ ಚಂದ್ರಪಾತದಲ್ಲಿ ಕಳೆಯುವದು, ದೃಕ್ಸಿದ್ಧ ಗ್ರಹದಿಂದ ಸಾಧಿತ ತಿಥ್ಯಾದಿಗಳು ಶ್ರಾದ್ಧಾದಿಕರಣಾನರ್ಹವಾದ್ದರಿಂದ ಅಲ್ಲಿ ಹೇಳಲ್ಪಡಲಿಲ್ಲ "ಶಾಕಲ್ಯ ಸಂಹಿತೆಯಲ್ಲಿ ನಾರದರಿಗೆ ಬ್ರಹ್ಮದೇವರು ಉಪದೇಶಿಸುತ್ತಾರೆ" (ಗ್ರಹಣೆಗ್ರಹಯೋಗೇಚಕಾಲ ಭಾಲ್ಲಗ್ನಸಾಧನೆ ಶೃಂಗೋನ್ನತ್ಯುದಯಾಸ್ತೇಷು ಗ್ರಹಬೀಜಂ ವಿಧೀಯತೇ ॥ ತಿಥ್ಯಾದಿಸಾಧನೇಕ್ವಾಪಿ ನಾರೆ ಬ್ರೋರ್ವಿಬೀಜಯೋಗಿತಾ ॥ ಅನ್ಯಥಾ ನಾಯನಾರ್ಕಸ್ಯ ರಾಶಿಸಂಕ್ರಮಸಂಭವೆ ॥ ಶುದ್ಧಸಂಕ್ರಮಣಶ್ರಾದ್ಧಂ ಪ್ರಸಜ್ಯೇತ ನಯುಜ್ಯತೆ ॥ ಮಾಂದ್ಯೈಕಕರ್ಮಣಾರ್ಕೇಂದೂ ತಿಥ್ಯಾದೌ ವಿದ್ಧಿನಾರದ ॥ ಈದೃಗ್ವಿವಾದ ವಿಷಯ ವನ್ನು ಕುರಿತು ಅನೇಕ ಸಭಾಜನ ವಿದ್ವಾಂಸರ ಸಮೂಹದಲ್ಲಿ ಕರುಂಗುಳಂ ಕೃಷ್ಣದೈವಜ್ಞರಿಂದ ಖಂಡಿಸಲ್ಪಟ್ಟು ಇರುವ ಪುಸ್ತಕದಲ್ಲಿ ವಿಸ್ತಾರವಾಗಿರುವ ಕಾರಣ ಇಲ್ಲಿ ಗ್ರಂಥವಿಸ್ತಾರ ಭೀತಿಯಿಂದ ಬರೆಯಲ್ಪಡಲಿಲ್ಲವು.

ಅವ ॥ ಶ್ರೀಶಂಕರಾಚಾರ್ಯರವರು ಚಂದ್ರನಿಗೆ ದೃಗ್ಗೋಚರಾರ್ಥವಾಗಿ
ಪಂಚಸಂಸ್ಕಾರವನ್ನು ಹೇಳುತ್ತಾರೆ.

ಮೂ॥ ದೃಕ್ಸಿದ್ಧಮಧ್ಯಮರವೇಃಕೃತ್ವಾಸ್ಫುಟಮತ್ರಚಂದ್ರಸ್ಯ।
ದೃತ್ಸಂಸ್ಕಾರೈಃಕಾರ್ಯಂಸ್ಪಷ್ಟತ್ವಂಪಂಚಭಿಸ್ತುತಾನ್ವಕ್ಷ್ಯೇ॥ ೫॥

ಟೀ॥ ರವಿಗೆ ಬೀಜಸಂಸ್ಕಾರವು ಮೂರುವಿಧ ಮಾಂದಸಂಸ್ಕಾರವು ಈ ಯೆರಡು ಫಲಸಂಸ್ಕಾರವು ನಿಶ್ಚಯಿಸಲ್ಪಟ್ಟಿತು ಮಧ್ಯ ರವಿಗೆ ಬೀಜಸಂಸ್ಕಾರ ಮಾಡಿ ನಂತರ ಮೂರುಪ್ರಕಾರ ಮಾಂದಫಲ ಸಂಸ್ಕಾರವನ್ನು ಮಾಡಬೇಕೆಂದು ಹೇಳಲ್ಪಡುತ್ತೆ ಚಂದ್ರನಿಗೆಮಾತ್ರ ಯೆರಡುಪ್ರಕಾರ ಮಾಂದಫಲ ಸಂಸ್ಕಾರಾನಂತರ ಪಂಚಸಂಸ್ಕಾರ ಮಾಡಬೇಕು ಅದರಲ್ಲಿ ೧ ಮೂರನೇ ಸೂರ್ಯ ಭುಜಾಫಲ ಸಂಸ್ಕಾರವು ೨ ಪಾತೋನಚಂದ್ರ ಸಂಸ್ಕಾರವು ೩ ಚಂದ್ರೋಚ್ಚ ಸಾರ್ಕ್ಯರೆಂದು ಕೇಂದ್ರ ಸಂಸ್ಕಾರವು ೪ ವ್ಯರ್ಕೇಂದು ಫಲಸಂಸ್ಕಾರವು ೫ ಪ್ರಾಕ್ಕಲಾಂತರ ಸಂಸ್ಕಾರವು ಎಂಬ ಪಂಚಸಂಸ್ಕಾರವು ಚಂದ್ರನಿಗೆ ಹೇಳಲ್ಪಡುತ್ತೆ.

ಅವ॥ ೧ನೆ ಸಂಸ್ಕಾರವಾದ ತೃತೀಯರವಿಬಾಹುಫಲ ಸಂಸ್ಕಾರವು.

ಮೂ॥ ದೃಕ್ಸಿದ್ಧಭಾನುಬಾಹೋಃಫಲವಿಕಲಾಃಖಾಕ್ಷಿಬಾಣಭಕ್ತಫಲಂ ।
ಲಿಪ್ತಾದ್ಯಂಪೂರ್ವೋಕ್ತಾದ್ವ್ಯತ್ಯಯತಃಕಾರ್ಯಮತ್ರಪುಷ್ಪವತೋಃ॥ ೬॥

ಟೀ॥ ದೃಕ್ಸಿದ್ಧ ಸ್ಫುಟರವಿ ಭುಜಾಫಲವನ್ನು ವಿಲಿಪ್ತಿಮಾಡಿ ೫೨೦ ರಿಂದ ಭಾಗಿಸಿ ಬಂದಲಿಪ್ತಾದಿ ಫಲವನ್ನು ಪೂರ್ವೋಕ್ತ ಸ್ಫುಟಾಧ್ಯಾಯದಲ್ಲಿ ಹೇಳಿರುವದಕ್ಕೆ ವ್ಯತಿರಿಕ್ತವಾಗಿ ಧನಭುಜಾಫಲವಾದರೆ ಸೂರ್ಯಚಂದ್ರರಲ್ಲಿ ಕಳೆಯುವದು, ರುಣಭುಜಾಫಲವಾದರೆ ಕೂಡುವದು.

ಅವ ॥ ೨ನೆ ಪಾತೋನಚಂದ್ರಸಂಸ್ಕಾರವು.

ಮೂ॥ ಪಾತೋನಚಂದ್ರಬಾಹುಜ್ಯಾಕೋಟಿಜ್ಯಾಪರಸ್ಪರೇಣಹತಾ ।
ಪಂಚಹೃತಾತ್ಫಲಮೃಣಧನಮೋಜೆಯುಗ್ಮೆಪದೆಸ್ಥಿತೆಕೇಂದ್ರೆ॥ ೭॥

ಟೀ ॥ ಚಂದ್ರಸ್ಫುಟದಲ್ಲಿ ರಾಹುವನ್ನು ಕಳೆದು ಭುಜಕೋಟಿಜ್ಯೆಗಳನ್ನು ಸಾಧಿಸಿ ಭುಜಕೋಟಿಜ್ಯೆಗಳನ್ನು ಅನ್ಯೋನ್ಯವಾಗಿ ಒಂದರಿಂದ ಮತ್ತೊಂದನ್ನು ಗುಣಿಸಿ ೫ ರಿಂದ ಭಾಗಿಸಿ ಬಂದ ಲಿಪ್ತಾದಿಫಲವನ್ನು ಓಜಪದಕೇಂದ್ರವಾದರೆ ರುಣವು ಯುಗ್ಮಪದಕೇಂದ್ರವಾದರೆ ಧನವು ಪ್ರಥಮ ಸಂಸ್ಕಾರಮಾಡಿದ ಚಂದ್ರನಲ್ಲಿ ಮಾಡಲು ದ್ವಿತೀಯ ಸಂಸ್ಕಾರವಾಗುವದು.

ಅವ॥ ೩ನೆ ಚಂದೋಚ್ಚಸಾರ್ಕವ್ಯರ್ಕೇಂದುಕೇಂದ್ರಸಂಸ್ಕಾರವು.

ಮೂ॥ ಚಂದೋಚ್ಚಾಚ್ಛೋಧಿತರವಿಕೋಟಿಜ್ಯಾವರ್ಕವಿಧುಭುಜಗುಣೇನ ।
ನಿಹತಾಕಲಿಕೃತಾಸಾತಿಥಿಹತಶಶಿಮಂದಹಾರಹೃಲ್ಲಬ್ಧಂ॥ ೮॥
ಭಾಗಾದಿಕಮಿಂದೂಚ್ಚೋನರವೌಮಕರಾದಿರಾಶಿಷಟ್ಕಸ್ಥೆ ।
ವ್ಯರ್ಕೇಂದೂರ್ಜೂಕಾದಿಗತೋಯದಿಧನಮೃಣಮಾಜಾದಿಸಂಸ್ಥಶ್ಚೇತ್॥ ೯॥
ಕರ್ಕ್ಯಾದಿಸ್ಥೆಕೋಟಿಜ್ಯಾವ್ಯರ್ಕೇಂದೌಮೇಷಮುಖಸಂಸ್ಥೆ ।
ಸ್ಯಾದ್ಧನಮೇತದ್ವ್ಯರ್ಕೇಂದೌಜೂಕಾದಿಸ್ಥೆಗ್ರಹೆತುರುಣಂ। ೧೦॥

ಟೀ ॥ ಚಂದೋಚ್ಚದಲ್ಲಿ ರವಿಯನ್ನು ಶೋಧಿಸಿ ಕೋಟಿಜ್ಯೆಯನ್ನು ಸಂಪಾದಿಸಿ, ವ್ಯರ್ಕೇಂದು ಸಂಪಾದಿತ ಭುಜಜ್ಯೆಯಿಂದ ಗುಣಿಸಿ ಲಿಪ್ತಿಯನ್ನುಮಾಡಿ ಚಂದ್ರಮಂದಹಾರಕವನ್ನು ೧೫ ರಿಂದ ಗುಣಿಸಿ ಇದರಿಂದ ಭಾಗಿಸಿ ಬಂದ ಭಾಗಾದಿ ಫಲವನ್ನು, ಚಂದೋಚ್ಚದಲ್ಲಿ ರವಿಯಂ ಶೋಧಿತ ಕೋಟಿಜ್ಯೆಯು ಮಕರಾದಿ ರಾಶಿ ಷಟ್ಕದಲ್ಲಿದ್ದು, ವ್ಯರ್ಕೇಂದು ತುಲಾದಿಷಟ್ಕವಾದರೆ ಧನವನ್ನು ಮೇಷಾದಿ ರಾಶಿ ಷಟ್ಕವಾದರೆ ದ್ವಿತೀಯ ಸಂಸ್ಕೃತ ಚಂದ್ರನಿಗೆ ಮಾಡುವದು. ಪೂರ್ವೋಕ್ತ ಕೋಟಿಜ್ಯೆಯು ಕಟಕಾದಿರಾಶಿ ಷಟ್ಕದಲ್ಲಿದ್ದು, ವ್ಯರ್ಕೇಂದು ಮೇಷಾದಿಯಾ

ದರೆ ಧನವು ತುಲಾದಿಯೊಡದರೆ ದ್ವಿತೀಯ ಸಂಸ್ಕೃತ ಚಂದ್ರನಲ್ಲಿ ಋಣವು ಮಾಡುವದು.

ಅವ॥ ೪ನೆ ವ್ಯರ್ಕೇಂದು ಫಲಸಂಸ್ಕಾರವು.

ಮೂ॥ ವ್ಯರ್ಕೇಂದೋರ್ಬಾಹುಜ್ಯಾಕೋಟಿಜ್ಯಾನ್ಯೋನ್ಯಗುಣಿತರಾಶಿಸ್ಸ್ಯಾತ್ ।
ಲಿಪ್ತಾದ್ಯಂಫಲಮೋಜೇಸ್ವಂಯುಗ್ಮೇತ್ವರ್ಣ್ಣಮಸ್ಪಹಂಟೀಟಿ॥ ೧೧॥

ಟೀ॥ ತೃತೀಯಫಲ ಸಂಸ್ಕೃತ ಚಂದ್ರನಲ್ಲಿ ಸ್ಫುಟರವಿಯನ್ನು ಶೋಧಿಶಿ ಭುಜಕೋಟಿಜ್ಯೆಯಂ ಸಾಧಿಶಿ ಪರಸ್ಪರ ಗುಣಿಶಿ ಭಾಗಾದಿಗಳನ್ನು ಲಿಪ್ತಾದಿಯನ್ನಾಗಿ ಭಾವಿಶಿ ವ್ಯರ್ಕೇಂದು ಓಜಪದವಾದರೆ ಕೂಡುವದು, ಯುಗ್ಮಪದವಾದರೆ ತೃತೀಯ ಸಂಸ್ಕೃತ ಚಂದ್ರನಲ್ಲಿ ಕಳಯುವದು.

ಅವ ॥ ೫ನೆ ಪ್ರಾಣಕಲಾಂತರ ಸಂಸ್ಕಾರವು.

ಮೂ॥ ಸಾಯನಸೂರ್ಯಭುಜಜ್ಯಾಕೋಟಿಜ್ಯಾಸಂಹತಾಚಪುನರೇಷಾ ।
ಸತ್ರ್ಯಂಘ್ರಿವೇದ(೪॥)ನಿಘ್ನಾಪ್ರಾಣಕಲಾಂತರಮಿತೀಹಸಂಪ್ರೋಕ್ತಾ॥
ಪ್ರಾಣಕಲಾಂತರನಿಹತಾಗ್ರಹಗತಯಶ್ಚಕ್ರಲಿಪ್ತಿಕಾವಿಹೃತಾಃ ।
ಲಿಪ್ತಾದಿಕಂಭವೇತ್ಫಲಮೋಜೇರ್ಣ್ಣಂಯುಗ್ಮಗೇಪನಂಸೂರ್ಯೆ॥ ೧೨॥
ಸಂಸ್ಕಾರಪಂಚಕೈರೇಕ್ಯೈರಿಂದುರ್ದೃಕ್ಸಮಾನಪಭವೇತ್ ।
ಗತಿರಸ್ಯತುಪೂರ್ವಾಪರಖಗಯೋಸ್ಪಾದ್ಯದಂತರಂಗತ್ಯೇಷ್ಯೇಣ॥ ೧೪॥

ಟೀ ॥ ದೃಕ್ಸ್ಫುಟಸಾಯನ ಭುಜಕೋಟಿಜ್ಯೆಗಳನ್ನು ಪರಸ್ಪರ ಗುಣಿಶಿ ಯಥಾಸ್ಥಾನ ಭಾಗಾದಿಗಳನ್ನಿರಿಶಿ ೪॥ ಅಂದರೆ ೪ ಭಾಗ ೪೫ ಕಲೆಯಿಂದ ಯಥಾಸ್ಥಾನವಾಗಿ ಗುಣಿಶಿದ್ದು ಪ್ರಾಣ ಕಲೆಯಾಗುವದು, ಇದರಿಂದ ಗ್ರಹಸ್ಫುಟ ಗತಿಯನ್ನು ಗುಣಿಸಿ ೨೧೬೦೦ ರಿಂದ ಭಾಗಿಸಿ ಬಂದ ಲಿಪ್ತಾದಿಫಲವನ್ನು ಸಾಯನ ಸೂರ್ಯನು ಓಜಪದಸ್ಥನಾದರೆ ಚತುರ್ಥ ಸಂಸ್ಕೃತ ಚಂದ್ರನಲ್ಲಿ ಋಣವು ಯುಗ್ಮಪದಸ್ಥನಾದರೆ ಧನವು ಮಾಡಬೇಕು ಹೀಗೆ ಪಂಚಸಂಸ್ಕಾರದಿಂದ ಚಂದ್ರನು ದೃಕ್ಸಾಮ್ಯ ವಾಗುವನು. ಈ ಪ್ರಾಣಕಲಾಂತ ಸಂಸ್ಕಾರವು ರವ್ಯಾದಿ ಸಪ್ತ ಗ್ರಹಗಳಿಗು ತತ್ತದ್ಗತಿ ಸಾಧಿಸುವದು ಅವಶ್ಯವು.

ಉ ದಾ ಹ ರ ಣ.

ಕಲಿಗತ ೪೯೭೫ ವರ್ತಮಾನಭಾವಸಂವತ್ಸರ ಮೇಷಪ್ರವೇಶವಾರಾದಿ ವರ್ಷಾಂತಧ್ರುವ ೪-೧೮-೪೭. ಚಂದ್ರರಾಶ್ಯಾದಿಧ್ರುವ ೧೧-೦-೩೭-೦ ಚಂದ್ರೋಚ್ಚ ೫-೨೦-೪೮-೨೭ ರಾಹು ೦-೧೪-೩೭-೬ ವೈಶಾಖ ಶುಕ್ಲ ಪೂರ್ಣಿಮಾ ಶುಕ್ರವಾರ ಸೌರವರ್ಷಾಂತಾದ್ಯ ಹರ್ಗ್ಗಣ ೧೮ ಈ ದ್ಯುಗಣ ೭೪ಅಂಶ ೦-೦-೧೫-೭೫ ಅಹರ್ಗ್ಗಣವಲ್ಲಿ ಕಳಯಲು ರವಿ ೦-೧೭-೪೫-೩೫ ಚಂದ್ರನಿಗೆ ಅಹರ್ಗ್ಗಣವನ್ನು

ಎರಡುಪ್ರತಿಇಟ್ಟು ಒಂದುಪ್ರತಿಯನ್ನು ೧೨ರಿಂದ ಗುಣಿಸಿದ್ದು ೨೧೬ ಇದರ ೬೮ನೆ ಅಂಶವನ್ನು ಕೂಡಲು ೨೧೯-೧೦-೩೫ ಮತ್ತೊಂದು ಪ್ರತಿಯೊದ ಅಹರ್ಗಣದಲ್ಲಿ ಕೂಡಲು ೨೩೭-೧೦-೩೫ ಮಧ್ಯ ಚಂದ್ರನಾಯಿತು, ಅಹರ್ಗಣವನ್ನು ೧೫೦ರಿಂದ ಭಾಗಿಸಿ ಬಂದ ಕಲಾದಿಫಲ ೦-೭ರವಿ ಚಂದ್ರರಲ್ಲಿ ಶೋಧಿಸುವದು, ಅಹರ್ಗಣವನ್ನು ೩ರಿಂದ ಗುಣಿಸಲು ೫೪ ಇದನ್ನು ೮೦೮ ರಿಂದ ಭಾಗಿಸಿದ ರಾಶ್ಯಾದಿ ಚಂದ್ರೋಚ್ಚ ೦-೨-೦-೧೭ ದ್ಯುಗಣವನ್ನು ೫೬೬ ರಿಂದ ಭಾಗಿಸಿ ಬಂದ ರಾಶ್ಯಾದಿ ರಾಹು ೦-೦-೫೭-೧೪ ಈಗ್ರಹಗಳನ್ನು ವರ್ಷಾಂತಧ್ರುವಗಳಲ್ಲಿ ಸಂಕಲನ ಮಾಡುವದು ರವಿ ೦-೧೭-೪೪-೩೫ ಚಂದ್ರ ೬-೨೭-೩೬-೨೮ ಚಂದ್ರೋಚ್ಚ ೫-೨೨-೨೯-೫೫ ವರ್ಷಾಂತ ಧ್ರುವದಲ್ಲಿ ರಾಹುವನ್ನು ವ್ಯವಕಲನ ಮಾಡುವದು ರಾಹು ೦-೧೩-೩೫-೧೨ ಸಂಕ್ರಮಣ ಘಳಿಗೆ ೧೮-೪೭ ಇದರಿಂದ ಗ್ರಹಗತಿಯನ್ನು ಗುಣಿಸಿ ೬೦ ರಿಂದ ಭಾಗಿಸಿ ಬಂದ ಫಲವನ್ನು ಕಳೆಯಲು ಅರ್ಧರಾತ್ರಿ ಸಮಯ ರವಿ ೦-೧೭-೨೫-೫೮ ಚಂದ್ರ ೬-೨೩-೩೫-೫೯ ಚಂದ್ರೋಚ್ಚ ೫-೨೨-೪೭-೫ ಫಲ ಸಂಯುಕ್ತ ರಾಹು ೦-೧೩-೩೬-೧ ಅರ್ಧಗತಿ ರಹಿತ ದೇಶಾಂತರಫಲ ಸಂಸ್ಕೃತ ಮಧ್ಯಾಹ್ನಕಾಲ ರವಿ ೦-೧೬-೫೬-೨ ಚಂದ್ರ ೬-೧೬-೫೪-೧೯ ಚಂದ್ರೋಚ್ಚ ೫-೨೨-೪೪-೩೦ ರಾಹು ೦-೧೩-೩೭-೩೬.

## ದೃಕ್ಸಂಸ್ಕಾರವು.

೪೯೭೫ ಕಲ್ಯಬ್ಧ ೫೦೦ ರಿಂದ ಭಾಗಿಸಿ ಬಂದಕಲಾದಿಫಲ ೯-೫೭ ಸಂಯುಕ್ತರವಿ ೦-೧೭-೫-೫೯ ಕಲ್ಯಬ್ದವಂ ೯೦೦ ರಿಂದ ಭಾಗಿಸಿ ಬಂದ ಭಾಗಾದಿಫಲ ೫-೩೧-೪೦ ಕಳೆದ ಚಂದ್ರ ಉಚ್ಚ ೫-೧೭-೧೨-೫೦ ಕಲ್ಯಬ್ದವ ೨೧೬೦೦ ರಿಂದ ಭಾಗಿಸಿದ ಕಲಾದಿಫಲ ೦- ರಹಿತ ರಾಹು ೦-೧೩-೩೭-೩೬.

## ಸ್ಫುಟೀಕರಣೋಪಾಯವು.

ದೃಕ್ಸಿದ್ಧ ಮಧ್ಯರವಿ ೦-೧೭-೫-೫೯ ರವಿ ಮಂದೋಚ್ಚ ೨-೧೮-೨೪-೩೭ ಕೇಂದ್ರ ೨-೧-೧೮-೩೮ ಇದೆ ಭುಜವು ೩ ರಾಶಿಯಲ್ಲಿ ಕಳೆದ ಕೋಟಿ ೦-೨೮-೪೧-೨೨ ಭುಜಜ್ಯಾ ೭-೧೨-೧೦ ಕೋಟಿಜ್ಯಾ ೩-೫೪ ಕೋಟಿಜ್ಯಾರ್ಧ ಸಂಸ್ಕೃತ ಮಂದಭೇದ ೨೫೫-೫ ರಿಂದ ಭುಜಜ್ಯೆಯನ್ನು ಭಾಗಿಸಿ ಬಂದ ಭಾಗಾದಿ ಫಲ ೧-೫೪-೪೩ ಸಂಕಲಿತ ಮಧ್ಯರವಿ ೦-೧೯-೦-೪೨ ಸ್ಫುಟಗತಿ ೫೮-೭.

ಮಧ್ಯಚಂದ್ರ ೬-೧೬-೫೪-೧೯ ದೃಕ್ಸಿದ್ಧ ಚಂದ್ರೋಚ್ಚ ೫-೧೭-೧೨-೫೦ ಸೂರ್ಯ ಭುಜಾಫಲ ಲಿಪ್ತಾದಿ ೧೧೪-೪೩ ಚಂದ್ರ ಮಧ್ಯಗತಿಯಿಂದ ಗುಣಿಸಿ ೨೧೬೦೦ ರಿಂದ ಭಾಗಿಸಿ ಬಂದ ರವಿಭುಜಾಫಲ ಲಬ್ಧ ಲಿಪ್ತಾದಿ ೪-೧೫ ಸಂಕಲಿತ ಮಧ್ಯ ಚಂದ್ರ ೬-೧೬-೫೮-೩೪ ಕೇಂದ್ರ ೧೧-೦-೧೪-೧೬ ಋಣಭುಜ ೦-೨೯-

೪೫-೪೪ ಕೇಂದ್ರವನ್ನು ೯ ರಾಶಿ ಕಳೆದ ಕೋಟಿ ೨-೦-೧೪-೧೬ ಭುಜಜ್ಯಾ ೪-೨-೬ ಕೋಟಿಜ್ಯಾ ೭-೮ ಕೋಟಿಜ್ಯಾರ್ಧ ಸಂಸ್ಕೃತ ಮಂದಛೇದ ೧೦೦-೩೪ ರಿಂದ ಭುಜಜ್ಯೆಯನ್ನು ಭಾಗಿಶಿ ಬಂದ ಭಾಗಾದಿ ಮಂದಫಲ ೨-೨೪-೨೬ ಇದರನ್ನು ಚಂದ್ರನಲ್ಲಿ ವ್ಯವಕಲನ ಮಾಡಿದ ಸ್ಫುಟಚಂದ್ರ ೬-೧೪-೩೪-೮.

೧ನೆ ಬಾಹುಫಲ ಸಂಸ್ಕಾರವು.

ಸೂರ್ಯ ಭುಜಾಫಲ ೧-೫೪-೪೩ ವಿಲಿಪ್ತೀಕರಿಶಿ ೫೨೦ ರಿಂದ ಭಾಗಿಶಿದ ಕಲಾದಿಫಲ ೧೩-೧೪ ಧನ ಭುಜಾಫಲವಾದ್ದರಿಂದ ಸೂರ್ಯ ಚಂದ್ರರಲ್ಲಿ ವ್ಯತ್ಯಸ್ತವಾಗಿ ಕಳೆಯಲು ರವಿ ೦-೧೮-೪೭-೨೮ ಚಂದ್ರ ೬-೧೪-೨೦-೫೪.

೨ನೆ ಪಾತೋನ ಚಂದ್ರ ಸಂಸ್ಕಾರವು.

ಚಂದ್ರ ೬-೧೪-೨೦-೫೪ ರಾಹು ೬-೧೩-೩೭-೩೭ ರಾಹು ರಹಿತ ಚಂದ್ರ ಕೇಂದ್ರ ೬-೦-೪೨-೧೮ ಷಡ್ರಾಶಿ ರಹಿತ ಭುಜ ೦-೦-೪೨-೧೮ ಕೋಟಿ ೨-೨೯-೧೭-೪೨ ಭುಜಜ್ಯೆ ೦-೬ ಕೋಟಿಜ್ಯೆ ೮-೧೮ ಪರಸ್ಪರ ಗುಣಿತ ೦-೦-೪೮ ಇದರ ಪಂಚಮಾಂಶ ೦-೦-೯ ಓಜಪದಕೇಂದ್ರ ವಾದ್ದರಿಂದ ಚಂದ್ರನಲ್ಲಿ ಕಳೆದ ಚಂದ್ರ ೬-೧೪-೨೦-೪೫.

೩ನೆ ಚಂದ್ರೋಚ್ಚಸಂಸ್ಕಾರ್ಕವ್ಯರ್ಕೇಂದುಕೇಂದ್ರಸಂಸ್ಕಾರವು.

ಸ್ಫುಟರವಿ ೦-೧೮-೪೭-೨೮ ಚಂದ್ರೋಚ್ಚ ೫-೧೭-೧೨-೫೦ ಕೇಂದ್ರ ೪-೨೮-೨೫-೨೨ ಕೋಟಿ ೧-೨೮-೨೫-೨೨ ಚಂದ್ರ ೬-೧೪-೨೦-೪೫ ವ್ಯರ್ಕೇಂದು ೫-೨೫-೩೩-೧೭ ಭುಜ ೦-೪-೨೬-೧೧ ಜ್ಯಾ ೦-೩೮ ರವಿ ರಹಿತ ಚಂದ್ರೋಚ್ಚ ಕೋಟಿಜ್ಯೆ ೬-೫೯ ಇಂದ ವ್ಯರ್ಕೇಂದು ಭುಜಜ್ಯೆ ೦-೩೮ ಅನ್ಯೋನ್ಯ ಗುಣಿತ ೫-೩-೨೨ ಚಂದ್ರ ಮಂದಸ್ಫುಟಹಾರಕ ೧೦೦-೩೪ ಪಂಚದಶ ೧೫ ಗುಣಿತ ೧೫೦೮-೩೦ ರಿಂದ ಭಾಗಿಶಿ ಬಂದ ಭಾಗಾದಿಫಲ ೦-೧೨-೩ ಇದನ್ನು ದ್ವಿತೀಯ ಸಂಸ್ಕಾರ ಸಂಸ್ಕೃತ ಚಂದ್ರಸ್ಫುಟದಲ್ಲಿ ಕೂಡಿದ ಚಂದ್ರ ೬-೧೪-೩೨-೪೮.

೪ನೆ ವ್ಯರ್ಕೇಂದುಫಲ ಸಂಸ್ಕಾರವು.

ಸ್ಫುಟರವಿ ೦-೧೮-೪೭-೨೮ ವ್ಯರ್ಕೇಂದು ೫-೨೫-೪೪-೦ ಭುಜ ೦-೪-೧೬-೦ ಕೋಟಿ ೨-೨೫-೪೪-೦ ಭುಜಜ್ಯೆ ೦-೩೮ ಕೋಟಿಜ್ಯೆ ೮-೬ ಅನ್ಯೋನ್ಯ ಗುಣಿತಲಿಪ್ತಾದಿ ೪-೫೧ ವ್ಯರ್ಕೇಂದು ಯುಗ್ಮಪದವಾದ್ದರಿಂದ ತೃತೀಯ ಸಂಸ್ಕೃತ ಚಂದ್ರನಲ್ಲಿ ಕಳೆದ ಚಂದ್ರ ೬-೧೪-೨೭-೫೭ ಗತಿ ಸಾಧನಾರ್ಥವಾಗಿ ಮರುದಿವಸ ಇದೇಪ್ರಕಾರ ಸಾಧಿತ ಚಂದ್ರ ೬-೨೬-೨೬-೪೧ ಈ ಯೆರಡರ ಅಂತರವೇ ಗತಿ ೭೧೮-೪೪.

### ೪ನೆ ಪ್ರಾಣಕಲಾಂತರ ಸಂಸ್ಕಾರವು.

ಸ್ಫುಟರವಿ ೦-೧೮-೪೭-೨೮ ಅಯನಾಂಶ *೨೧-೨೦-೦-೦ ಸಾಯನರವಿ ೧-೧೦-೭-೨೮ ಇದೆ ಭುಜಕೋಟಿ ೧-೧೯-೫೨-೩೨ ಭುಜಜ್ಯಾ ೫-೧೧ ಕೋಟಿಜ್ಯಾ ೬-೧೧ ಅನ್ಯೋನ್ಯ ಗುಣಿತ ೩೨-೯ ಇದನ್ನು ೪-೪೫ ಭಾಗವಾದ ೨೮೫ ಲಿಪ್ತಿಯಿಂದ ಗುಣಿಸಲು ೧೫೨-೪೨ ಇದೆ ಪ್ರಾಣಕಲೆ ಇದರಿಂದ ಚಂದ್ರಸ್ಫುಟಗತಿಯನ್ನು ಗುಣಿಶಿ ೨೧೬೦೦ ರಿಂದ ಭಾಗಿಶಿ ಬಂದ ಲಿಪ್ತ್ಯಾದಿ ೫-೫ ಇದನ್ನು ಸಾಯನರವಿ ಓಜಪದಸ್ಥನಾದ್ದರಿಂದ ಚಂದ್ರನಲ್ಲಿ ಕಳದ ಚಂದ್ರ ೬-೧೪-೨೨-೫೨ ಗತಿ ೭-೧೮-೪೪ ಹೀಗೆ ರವಿಸ್ಫುಟ ಗತಿಯನ್ನು ಪ್ರಾಣಕಲಾಂತರದಿಂದ ಗುಣಿಶಿ ಚಕ್ರಲಿಪ್ತಿಯಾದ ೨೧೬೦೦ ರಿಂದ ಭಾಗಿಶಿ ಬಂದ ಲಿಪ್ತ್ಯಾದಿ ಫಲ ರಹಿತ ಸ್ಫುಟರವಿ ೦-೧೮-೪೭-೩ ಗತಿ ೫೮-೭ ಇದೆಪ್ರಕಾರವಾಗಿ ರವ್ಯಾದಿ ಸಪ್ತಗ್ರಹಗಳಿಗೆ ತತ್ತದ್ಗತಿಗಳಿಂದ ಸಾಧಿಸಬೇಕು.

ಅವ॥ ದೃಕ್ಸಿದ್ಧಗ್ರಹಗಳಪ್ರಯೋಜನವು ಹೇಳಲ್ಪಡುತ್ತೆ.

ಮೂ॥ ಗ್ರಹಣಗ್ರಹೊದಯಾಸ್ತಶೃಂಗೊನ್ನತಿಖಚರಯೊಗಕಾಲೆಷು ।
ದೃಕ್ಸಿದ್ಧೆಂದುಸ್ಸಾಧ್ಯಸ್ಸ್ಯಾದೆವಂನೆತರಕ್ರಿಯಾಸುಬುಧ್ಯೈಃ ॥

ಟೀ॥ ಗ್ರಹಣರವ್ಯಾದಿ ಗ್ರಹಾಸ್ತೋದಯ ಚಂದ್ರ ಶೃಂಗೋನ್ನತಿ ಗ್ರಹಯುದ್ಧ ಸಮಾಗಮಾತಿಗಳನ್ನು ದೃಕ್ಸಿದ್ಧ ಗ್ರಹಗಳಿಂದ ಸಾಧಿಸಬೇಕು, ತಿಥ್ಯಾದಿಗಳಿಗೆ ದೃಕ್ಸಂಸ್ಕಾರ ಮಾಡಕೂಡದು, ಈವಿಷಯವಾಗಿ ಕರುಂಗುಳಂ ಕೃಷ್ಣದೈವಜ್ಞರಿಂದ ವಿರಚಿತವಾದ ದೃಗ್ಗಣಿತ ಪಂಚಾಂಗ ಖಂಡನವೆಂಬ ಪುಸ್ತಕವು ಮದ್ರಾಸಿನಲ್ಲಿ ಪ್ರಿಂಟುಮಾಡಿಧಾರೆಯಾಗಿ ಅದರಿಂದ ತಿಳಿಯಬಹುದು.

ಅವ॥ ಪರ್ವಾಂತಕಾಲ ಲಕ್ಷಣವು ಹೇಳಲ್ಪಡುತ್ತೆ.

ಮೂ॥ ಏಷ್ಯಗತಪರ್ವತಾಲಾಂತಾಗತರವಿಹಿಮಕರೌತುತುಲ್ಯೌಹಿ ।
ಸ್ಯಾತಾಂದರ್ಶೆರಾಕಾಂತೆಭಾಗಾದೆಸ್ಸಮೌಭವೆತಾಂಚ॥ ೧೬॥

ಟೀ॥ ವ್ಯರ್ಕೇಂದುವಿನಿಂದಾ ತಿಥಿ ಸಾಧನದಂತೇ ಪೂರ್ಣಿಮಾ ಅಮಾವಾಸ್ಯೆ ಘುಳಿಗೆಗಳನ್ನು ಸಾಧಿಸಿ ಆಪರ್ವಘುಳಿಗೆಗಳಿಂದಾ ರವಿ ಚಂದಗ್ರಹಗಳನ್ನು ತತ್ಕಾಲಕ್ಕೆ ಸಾಧಿಶಿದರೆ ಅಮಾವಾಸ್ಯೆಪರ್ವಾಂತ್ಯದಲ್ಲಿ ರವಿಚಂದ್ರರಿಬ್ಬರು ರಾಶ್ಯಾದಿ ವಿಕಲಾಂತ ಸಾಮ್ಯವಾಗುವರು ಪೂರ್ಣಿಮಾಂತ್ಯದಲ್ಲಿ ೬ ರಾಶಿ ವ್ಯತ್ಯಾಸವಾಗಿ ಭಾಗಾದಿ ವಿಕಲಾಂತ ಸಾಮ್ಯವಾಗುವರು ಹೀಗೆ ಸಾಮ್ಯವಾಗದೆ ಇದ್ದರೆ ಪುನಃ ವ್ಯರ್ಕೇಂದು ಸಾಧಿಶಿ ಬಬ್ದದ ಘುಳಿಗೆಗಳನ್ನು ಗತಗಮ್ಯವಾಗಿ ಮಾಡಿ ತತ್ಕಾಲ ಗ್ರಹ ಸಾಧಿಶಿದ ಭಂಗಾರವು ಪುಟಪಾಕ ಶೋಧಿತವಾದರೆ ಹ್ಯಾಗೆ ಕಲ್ಮಷವಿಲ್ಲದೆ ಪ್ರಕಾಶಿ

ಸುವದೋ ಹಾಗೆಯೇ ವಿಕಲಾಂತ ವ್ಯತ್ಯಾಸವಿಲ್ಲದೆ ಮೇಲೆ ಹೇಳಿದಂತೆ ಸಾಮ್ಯವಾಗಿರುವದು. ಇಂಥಾ ಶುದ್ಧಪರ್ವಾಂತಕಾಲವೆ ಚಂದ್ರಗ್ರಹಣ ಮಧ್ಯಕಾಲವು.

ಅವ॥ ಗ್ರಹಣ ಸಂಭವಜ್ಞಾನೋಪಾಯಃವು.

ಮೂ॥ ಪಾತೋನಚಂದ್ರಭಾಗೋರಂಶಾಸ್ತ್ರ್ಯಂದ್ರಾಲ್ಪಭಾಗತೋಗ್ರಹಣಂ ।
ಭವತೀಂದೋರಥಸೂರ್ಯಗ್ರಹಣಂಗ್ರಹಭಾಗತೋಲ್ಪಕಾಂಶಾಶ್ಚೇತ್॥ ೧೭॥

ಟೀ॥ ಚಂದ್ರಸ್ಫುಟದಲ್ಲಿ ರಾಹುವಂ ಕಳೆದ ಶೇಷಭಾಗವು ೧೨ ಕ್ಕಿಂತಲು ಅಧಿಕವಾಗದೆ ಇದ್ದಾಗ ಚಂದ್ರಗ್ರಹಣವು ೯ ಕ್ಕಿಂತಲು ನ್ಯೂನವಾಗಿ ಅಮಾವಾಸ್ಯೆಯಲ್ಲಿ ಇದ್ದಾಗ ಸೂರ್ಯಗ್ರಹಣವು ಸಂಭವಿಸುವವು ಈಭಾಗಗಳಿಗೆ ಅಧಿಕವಾದರೆ ಸಂಭವಿಸಲಾರದೆಂದಭಿಪ್ರಾಯವು.

ಅವ॥ ವಿಕ್ಷೇಪಸಾಧನೋಪಾಯವು.

ಮೂ॥ ಪಾತೋನಚಂದ್ರಕೇಂದ್ರೋದಿತದೋರ್ಜ್ಯಾತರ್ಕವಹ್ನಿನಿಹತಾಚೇತ್ ।
ಕೇಂದ್ರಪದಾಶಾವಶತಃ ಸ್ಯಾದ್ವಿಕ್ಷೇಪಃ ಕಲಾತ್ಮಕಃ ಶಶಿನಃ॥ ೧೮॥

ಟೀ॥ ಪಾತೋನ ಚಂದ್ರ ಭುಜಜ್ಯೆಯನ್ನು ೩೬ ಮುವ್ವತ್ತಾರರಿಂದ ಗುಣಿಸಲು, ಕಲಾತ್ಮಕವಿಕ್ಷೇಪ ವಾಗುವದು, ಕೇಂದ್ರ ಮೇಷಾದಿಯಾದರೆ ಉತ್ತರ ವಿಕ್ಷೇಪ ತುಲಾದಿಯಾದರೆ ದಕ್ಷಿಣ ವಿಕ್ಷೇಪವೆಂದು ಅಭಿಪ್ರಾಯವು.

ಅವ॥ ರವಿಚಂದ್ರ ರಾಹುಬಿಂಬಸಾಧನೋಪಾಯವು.

ಮೂ॥ ಷಟ್ಕೃತಹತಮಂದಗತಿರ್ವೇದನಿಧಿರ್ನ್ಯೂನರೂಪಹೃತಲಬ್ಧಂ ।
ರವಿಬಿಂಬಮುಥವಿಧೋಸ್ಸ್ಯಾತ್ಷಾಂಗಹತಾದ್ವ್ಯಷ್ಟಶಕ್ರಭಕ್ತಾಚ್ಚ॥ ೧೯॥
ಖಖರಶಹತವಿಧುಗತಿರಗನಿಗಮಾಗಮವೇದಸಂಹೃತಾದ್ಭೂಮೇಃ ।
ಬಿಂಬಸ್ಸ್ಯಾದಪಿಸೂರ್ಯಸ್ಫುಟಗತಿಸಂಸ್ಕಾರಮಿಹವಿಧೇಯಂಹಿ॥ ೨೦॥
ಲಿಪ್ತಾವಿಲಿಪ್ತಿಕಾಭಿರ್ಮನುಸುರಮಿತಿಭಿರ್ವಿಶುದ್ಧಮಿಹಿರಗತಿಃ ।
ಷಟ್ಕೃತನಿಘ್ನಾಷ್ಟಾಂಬರಶಿವಭಕ್ತಾಲ್ಲಬ್ಧಮಾನತಶ್ಶುದ್ಧಂ॥ ೨೧॥

ಟೀ ॥ ವಿಸ್ಫುಟ ಗತಿಯನ್ನು ೬೦೦ ರಿಂದ ಗುಣಿಸಿ ೧೭೯೪ ರಿಂದ ಭಾಗಿಸಿ ಬಂದ ಲಬ್ಧವೆ ರವಿಬಿಂಬವು, ಚಂದ್ರಸ್ಫುಟ ಗತಿಯನ್ನು ೬೦ ರಿಂದ ಗುಣಿಸಿ ೧೪೮೨ ರಿಂದ ಭಾಗಿಸಿ ಬಂದಲಬ್ಧವೆ ಚಂದ್ರಬಿಂಬವ್ಯಾಸಕಲಾದಿಯು, ಪುನಃ ಚಂದ್ರಸ್ಫುಟ ಗತಿಯನ್ನು ೬೦೦ ರಿಂದ ಗುಣಿಸಿ ೪೪೪೨ ರಿಂದ ಭಾಗಿಸಿದ ಕಲಾದಿ ಲಬ್ಧವೆ ರಾಹು ಬಿಂಬವು, ಆದರೆ ಈರಾಹುಬಿಂಬವು ಶುದ್ಧವಾಗ ಬೇಕಾದರೆ ಸ್ಫುಟ ಸೂರ್ಯ ಗತಿಯಲ್ಲಿ ೧೪-೩೩ ಕಳೆದು ನಿಂತ ಶೇಷವನ್ನು ೬೦೦ ರಿಂದ ಗುಣಿಸಿ ೧೧೦೮ ರಿಂದ ಭಾಗಿಸಿ ಬಂದ ಕಲಾದಿ ಫಲವನ್ನು ರಾಹು ಬಿಂಬದಲ್ಲಿ ಕಳೆಯಲು ಸ್ಫುಟ ರಾಹು ಬಿಂಬವಾಗುವದು, (ತಮೋಬಿಂಬಕ್ಕೆ) ರಾಹು ಬಿಂಬವೆಂತ ರೂಢಿಯಾಗಿರುವದು.

ಅವ॥ ಛಾದ್ಯಛಾದಕ ಪರಿಜ್ಞಾನೋಪಾಯವು.

ಮೂ॥ ಛಾದಯತಿಸೂರ್ಯಮಿಂದುರ್ಭೂಭಾಛಾದಯತಿಪೂರ್ಣಚಂದ್ರಂಹಿ ।
ಬಿಂಬೈಭಯಯೋಗದಳಾದ್ಧೀನೋವಿಕ್ಷೇಪಕೇಗ್ರಾಸಃ॥ ೧೧॥

ಟೀ॥ ಸೂರ್ಯಗ್ರಹಣಕ್ಕೆ ಚಂದ್ರನೇಛಾದಕನು ಸೂರ್ಯನೇ ಛಾದ್ಯನು, ಚಂದ್ರಗ್ರಹಣಕ್ಕೆ ಭೂಛಾಯೆ ಯಂದು ಪ್ರಸಿದ್ಧಿಯಾದಂಥಾ ರಾಹುವೇಛಾದಕನು, ಚಂದ್ರನೇ ಗ್ರಾಹ್ಯನು, ಭೂಛಾಯೆಗೆ, ಚಂದ್ರಪಾತವೆಂತಲು, ರಾಹುವೆಂತಲು ಪ್ರಸಿದ್ಧವು, ಗ್ರಾಹ್ಯಗ್ರಾಹಕ ಬಿಂಬಗಳೆರಡನ್ನು ಕೂಡಿ ಅರ್ಧಿಸಲು ಮಾನಯೋಗಾರ್ಧ ವಾಗುವದು ಇದರಲ್ಲಿ ವಿಕ್ಷೇಪವು ಕಳೆಯಲ್ಪಟ್ಟರೆ ಗ್ರಹಣಸ್ಪರ್ಶ ಉಂಟೆಂತಲು ಕಳೆಯುವದಕ್ಕಾಗದೆ ಅಧಿಕವಾದರೆ ಗ್ರಹಣಸ್ಪರ್ಶ ವಾಗುವದಿಲ್ಲವೆಂಬದಾಗಿ ಸೂಕ್ಷ್ಮರೂಪದಿಂದ ತಿಳಿಯಬೇಕು ಮುಂಚೆ ಹೇಳಲ್ಪಟ್ಟ ಛಾಗಾದಿಗಳು ಸ್ಥೂಲರೂಪವಾಗಿ ಹೇಳಲ್ಪಟ್ಟಿತು.

ಅವ॥ ಗ್ರಹಣಗ್ರಾಸಜ್ಞಾನೋಪಾಯವು.

ಮೂ॥ ವಿಕ್ಷೇಪೋಯದ್ಯಧಿಕೋಬಿಂಬೈಕ್ಯಾರ್ಧಾನ್ನಸಂಭವೇದ್ಗ್ರಹಣಂ ।
ಗ್ರಾಸಕಲಾಗ್ರಾಹ್ಯತನೋರಧಿತಾಶ್ಚೇದ್ಬಿಂಬತೋಧಿಕಶ್ಛನ್ನಂ॥ ೧೩॥

ಟೀ॥ ಗ್ರಾಹ್ಯಗ್ರಾಹಕ ಬಿಂಬಯೋಗಾರ್ಧದಲ್ಲಿ ವಿಕ್ಷೇಪವನ್ನು ಶೋಧಿಸಲು ನಿಂತ ಶೇಷವೆ ಗ್ರಾಸಲಿಪ್ತಾದಿಯು, ಬಿಂಬಯೋಗಾರ್ಧಕ್ಕಿಂತಲು ವಿಕ್ಷೇಪವು ಅಧಿಕವಾದರೆ ಗ್ರಹಣವು ಇಲ್ಲವೇ ಇಲ್ಲವೆಂದು ನಿದರ್ಶವಾಗಿ ತಿಳಿಯುವದು.

ಅವ॥ ಮಧ್ಯಸ್ಥಿತ್ಯರ್ಧಸಾಧನೋಪಾಯವು.

ಮೂ॥ ಬಿಂಬಾರ್ಧಯೋಗವರ್ಗೆವಿಕ್ಷೇಪಂವರ್ಗಿತಂವಿಶೋಧ್ಯಮಿತಃ ।
ಮೂಲಂಷಷ್ಟಿಹತಂವ್ಯರ್ಕೇಂದೋರ್ಗತಿಪ್ತಲಂಸ್ಥಿತಿದಳಂಸ್ಯಾತ್॥೧೪॥

ಟೀ ॥ ಬಿಂಬಯೋಗಾರ್ಧ ವರ್ಗದಲ್ಲಿ ವಿಕ್ಷೇಪವರ್ಗವನ್ನು ಕಳೆದ ನಿಂತಶೇಷಕ್ಕೆ ಮೂಲವನ್ನುಮಾಡಿ ಆಮೂಲ ಲಬ್ಧವನ್ನು ೬೦ ರಿಂದ ಗುಣಿಸಿ ವ್ಯರ್ಕೇಂದು ಗತಿಯಿಂದ ಭಾಗಿಸಿ ಬಂದ ಘಳಿಗೆ ವಿಘಳಿಗೆಗಳೇ ಸ್ಥಿತ್ಯರ್ಧ ಘಳಿಗೆಗಳು ಸ್ಥಿತ್ಯರ್ಧವೆಂದರೆ, ಗ್ರಹಣವು ಸ್ಪರ್ಶವಾಗಿ ಮೋಕ್ಷವಾಗುವದು ಇರುವ ಆದ್ಯಂತ ಘಳಿಗೆಗಳಲ್ಲಿ ಅರ್ಧವೆಂದಭಿಪ್ರಾಯವು.

ಅವ॥ ಸಂಪೂರ್ಣಗ್ರಾಸಬಂದಲ್ಲಿ ವಿಮರ್ದಾರ್ಧ ಸಾಧನೋಪಾಯವು.

ಮೂ॥ ಬಿಂಬಾಂತರಾರ್ಧವರ್ಗೆವಿಕ್ಷೇಪಂವರ್ಗಿತಂವಿಶೋಧ್ಯಾತಃ ।
ಮೂಲಂಷಷ್ಟಿವಿನಿಘ್ನಂವ್ಯರ್ಕೇಂದೋರ್ಭುಕ್ತಿಭಾಜಿತಂಮರ್ಧಃ॥ ೧೫॥

ಟೀ॥ ಗ್ರಾಹ್ಯಗ್ರಾಹಕ ಬಿಂಬಗಳಲ್ಲಿ ಅಧಿಕವಾಗಿರುವದರಲ್ಲಿ ನ್ಯೂನವಾಗಿರುವದನ್ನು, ಕಳೆದ ಶೇಷವನ್ನು ಅರ್ಧ ಮಾಡಲು ಬಿಂಬಾಂತರಾರ್ಧವಾಗುವದು ಈ

ಬಿಂಬಾಂತರಾರ್ಧ ವರ್ಗದಲ್ಲಿ ವಿಕ್ಷೇಪವರ್ಗವು ಯಾವಾಗ ಕಳಿಯಲ್ಪಡುತ್ತಿಯೋ ಆಗ ಸಂಸಪೂರ್ಣಗ್ರಾಸ ವಾಗುವದು ಹಾಗೆ ಕಳದಶೇಷದ ಮೂಲವನ್ನು ೬೦ರಿಂದ ಗುಣಿಶಿ ವ್ಯರ್ಕೆಂದು ಗತಿಯಿಂದ ಭಾಗಿಶಿ ಬಂದ ಘಳಿಗೆ ವಿಘಳಿಗೆಗಳು ವಿಮರ್ದ್ದಾರ್ಧವು (ವಿಮರ್ದ್ದಾರ್ಧವೆಂದರೆ) ಗ್ರಾಹ್ಯಬಿಂಬ ಪ್ರಮಾಣಕ್ಕಿಂತಲು ಅಧಿಕವಾಗಿ ಮುಚ್ಚಿಕೊಂಡು ಪುನಃ ಬಿಂಬಪ್ರಮಾಣಮಾತ್ರ ಸಂಪೂರ್ಣವಾಗಿ ಅಧಿಕವಿಲ್ಲದೆ ಇರುವ ಪರ್ಯಂತರ ಇರುವ ಘಳಿಗೆಯಲ್ಲಿ ಅರ್ಧವೆಂಬದಾತಿಳಿಯತಕ್ಕದ್ದು ಈ ವಿಮರ್ದ್ದಾರ್ಧವು ಸಂಪೂರ್ಣಗ್ರಾಸ ಬಾರ ಇದ್ದಾಗ ಬರುವದಿಲ್ಲ ಯೆಂಬುವದಕ್ಕೆ ಕಾರಣವನ್ನು ಊಹಿಸಿ ತಿಳಿಯಲು ಸುಲಭ ಸಾಧ್ಯವಾಗಿಯೆ ಇಧೆ.

ಅವ॥ ಸ್ಪರ್ಶ ಮೋಕ್ಷ ಮಧ್ಯಕಾಲಜ್ಞಾನೋಪಾಯವು.

ಮೂ॥ ಸ್ಪರ್ಶಸ್ಥಿತಿರಹಿತಸ್ಸ್ಯಪರ್ವಾಂತಸ್ಪರ್ಶಕಾಲಇತಿಜಾನೆ।
ಪರ್ವಾಂತಏವಮಧ್ಯೋಮೋಕ್ಷಸ್ಥಿತಿಸಂಯುತಸ್ತುಮುಕ್ತಿರಿತಿ॥ ೨೬॥

ಟೀ॥ ಪೂರ್ವೋಕ್ತವಾದ ಸ್ಥಿರೀಕೃತ ಪರ್ವಾಂತಕಾಲವೇ ಗ್ರಹಣಮಧ್ಯಕಾಲವು. ಈಮಧ್ಯಕಾಲದಲ್ಲಿ ಸ್ಥಿತ್ಯರ್ಧ ಘಳಿಗೆಗಳು ಕಳದರೆ ನಿಂತ ಶೇಷವೆ ಗ್ರಹಣಸ್ಪರ್ಶಕಾಲ ವಾಗುವದು, ಮಧ್ಯಕಾಲದಲ್ಲಿ ಸ್ಥಿತ್ಯರ್ಧ ಘಳಿಗೆ ಕೂಡಲು ಗ್ರಹಣ ಮೋಕ್ಷಕಾಲ ವಾಗುವದು, ಸ್ಥಿತ್ಯರ್ಧವನ್ನು ದ್ವಿಗುಣಿಸಿದ್ದೆ ಗ್ರಹಣಾದ್ಯಂತ ಪುಣ್ಯಕಾಲವು.(ಆದ್ಯಂತ) ಮದರೆ ಗ್ರಹಣ ಸ್ಪರ್ಶ ಮೊದಲು ಗ್ರಹಣ ಮೋಕ್ಷದವರಿಗೆ ಸಲ್ಲುವಂಥಾ ಘಳಿಗೆಗಳೆಂದಭಿಪ್ರಾಯವು.

ಅವ॥ ನಿಮೀಲನೋನ್ಮೀಲನಕಾಲಜ್ಞಾನೋಪಾಯವು.

ಮೂ॥ ಸ್ಪರ್ಶವಿಮರ್ದ್ದನೋಯಂಮೀಲನಕಾಲಶ್ಚಮುಕ್ತಿಮರ್ದ್ದೆನ।
ಸಹಿತೋನ್ಮೀಲನಕಾಲಸ್ಯಾತ್ಸರ್ವಗ್ರಾಸತೋವಿಧೋರ್ಗ್ರಹಣೇ॥ ೨೭॥

ಟೀ॥ ಗ್ರಹಣ ಮಧ್ಯಕಾಲದಲ್ಲಿ ವಿಮರ್ದ್ದಾರ್ಧವನ್ನು ಕಳಿದ ಶೇಷವೇ ನಿಮೀಲನ ಕಾಲವು ಪರ್ವಾಂತ ಮಧ್ಯಕಾಲದಲ್ಲಿ ವಿಮರ್ದ್ದಾರ್ಧವನ್ನು ಕೂಡಲು ಉನ್ಮೀಲನ ಕಾಲವಾಗುವದು, ವಿಮರ್ದ್ದಾರ್ಧವನ್ನು ದ್ವಿಗುಣಿಶಿದರೆ ಬಿಂಬಾದರ್ಶನ ಕಾಲ ವಾಗುವದು, ಬಿಂಬಪ್ರಮಾಣವನ್ನು ಮುಚ್ಚಿಕೊಂಡು ಬಿಂಬಕ್ಕಿಂತಲು ಅಧಿಕವಾಗಿ ಬಿಂಬ ಕಾಣದೆ ಮುಚ್ಚಿಕೊಂಡಿರುವದಕ್ಕೆ ಬಿಂಬಾದರ್ಶನವೆಂದಭಿಪ್ರಾಯವು. ಈನಿಮೀಲನೋನ್ಮಿಲನಕಾಲವು ಸಂಪೂರ್ಣ ಗ್ರಹಣಗಳಲ್ಲೇ ಬರುವವು.

ಅವ॥ ಗ್ರಾಸಾಂಶ ಪರಿಮಾಣ ಜ್ಞಾನೋಪಾಯವು.

ಮೂ॥ ಗ್ರಹಣೇಗ್ರಾಸಕಲಾದ್ಯಂಕಲಾಹತಂಛಾದ್ಯಬಿಂಬಲಿಪ್ತಾದ್ಯಂ।
ಗ್ರಹಣಕ್ಷೇತ್ರಕಲಾಸ್ಯುಃತ್ರೈರಾಶಿಕತಃಕಲಾವಶಾತ್ಕ್ಷೇತ್ರಂ॥ ೨೮॥

ಟೀ ॥ ಗ್ರಾಹ್ಯಬಿಂಬ ಲಿಪ್ತಾದಿಗಳಿಗೆ ಷೋಡಶಾಂಶ ೧೬ ಭಾಗಗಳಾದರೆ ಗ್ರಾಸಲಿಪ್ತಾದಿಗೆ ಎಷ್ಟಾಗುವದೆಂಬುವದನ್ನು ತ್ರೈರಾಶಿಕದಿಂದ ಗ್ರಾಸಾಂಶವನ್ನು ಕಾಣಬೇಕು.

ಅವ॥ ಸ್ಪರ್ಶಮೋಕ್ಷಾದಿ ದಿಕ್ ಜ್ಞಾನೋಪಾಯವು.

ಮೂ॥ ದಕ್ಷಿಣವಿಕ್ಷೇಪೊಯದ್ಯುತ್ತರಗೋಳೇಭವೇಚ್ಛಿವದಿಕ್ಸ್ಪರ್ಶಃ ।
ವಾಯುದಿಶಿಮುಕ್ತಿರಿಂದೊಪಿಹಿತಾಪಿಹಿತೆಮನ್ಯೆರುತರ್ವಹ್ನೆಃ॥ ೧೯॥
ಉತ್ತರವಿಕ್ಷೇಪೊಯದಿದಕ್ಷಿಣಗೋಳೆಗ್ನಿಭಾಗತಸ್ಪರ್ಶಃ ।
ನ್ಯೆರುತಿಮೋಕ್ಷಸ್ಸ್ಯಾತ್ಪಿಹಿತಾಪಿಹಿತೆವಾಯುಶಂಭುಹರಿತ್ರೋಶ್ಚ॥ ೨೦॥

ಟೀ॥ ದಕ್ಷಿಣ ವಿಕ್ಷೇಪವಾದರೆ ಉತ್ತರಗೋಳದಲ್ಲಿ ಈಶಾನ್ಯ ಸ್ಪರ್ಶವಾಗುವದು, ವಾಯವ್ಯ ಮೋಕ್ಷವಾಗುವದು, ನೈರುತ್ಯದಲ್ಲಿ ನಿಮೀಲನವು ಆಗ್ನೆಯದಲ್ಲಿ ಉನ್ಮೀಲನವು ಆಗುವದು, ಉತ್ತರ ವಿಕ್ಷೇಪವಾದರೆ ಆಗ್ನೆಯ ಸ್ಪರ್ಶವು ನೈರುತ್ಯ ಮೋಕ್ಷವು ವಾಯವ್ಯ ನಿಮೀಲನವು ಈಶಾನ್ಯೋನ್ಮೀಲನವು.

ಅವ॥ ಬಿಂಬಾದರ್ಶನ ಪರಮಾವಧಿಜ್ಞಾನೋಪಾಯವು.

ಮೂ॥ ಬಿಂಬಾದರ್ಶನಮಂಬರಸಂಭವನ್ನಾಸ್ತಂಭವೇದ್ವಿಮರ್ದಶ್ಚ ।
ಪರಮಾದ್ಯಂತಸ್ಯತುನಸ್ಯಾನ್ನಾಡೀಚತುಷ್ಟಯಾದಧಿಕಂ॥ ೨೧॥
ಸೂರ್ಯಗ್ರಹವಿಮರ್ದ್ದನಭೈಶಂಸ್ಯಾದಸ್ತಿಚೇದ್ವಿಘಟಿಕಾನಾಂ ।
ಪಂಚದಶಾನಾಂದ್ವಿಗುಣಾದಾದ್ಯಂತಾದರ್ಕದರ್ಶನಂನಭವೇತ್॥ ೨೨॥

ಟೀ ॥ ಬಿಂಬವು ಕಾಣದೆ ಮುಚ್ಚಿಕೊಳ್ಳುವಂಥಾ ನಿಮೀಲನೋನ್ಮೀಲನಾದ್ಯಂತವಾದ ಬಿಂಬಾದರ್ಶನ ಪರಮಾವಧಿ ಘಳಿಗೆ ೪ ಕ್ಕಿಂತಲು ಅಧಿಕವಾಗುವದಿಲ್ಲ ಸೂರ್ಯಗ್ರಹಣ ಸಂಪೂರ್ಣ ಗ್ರಾಸದಲ್ಲಿ ಬಿಂಬಾದರ್ಶನ ಪರಮಾವಧಿ ೮-೩೦- ಮೂವತ್ತು ವಿಘಳಿಗೆಗಳಿಗಿಂತಲು ಅಧಿಕವಾಗುವದಿಲ್ಲ.

ಅವ॥ ಗ್ರಹಣವರ್ಣ ಜ್ಞಾನೋಪಾಯವು.

ಮೂ॥ ಭಾನೋಃಪೂರ್ಣಗ್ರಾಸೆವಿರಳತಮಸ್ಸ್ವಪ್ರಕಾಶತೆಽಗತಿ ।
ತಾರಾಃಪರಿದೃಶ್ಯಂತೆಕೆಚಿತ್ಖಚರಾಶ್ಚದೃಷ್ಟಿವಿಷಯಾಸ್ಸ್ಯುಃ॥ ೨೩॥
ಜನಿತಪಾದಗ್ರಾಸೆಬಿಂಬೆಚಂದ್ರಸ್ಯಧೂಮ್ರವರ್ಣಂಹಿ ।
ಸ್ಯಾತ್ಕೃಷ್ಣವರ್ಣಮರ್ದ್ಧೆಧೂಮಂತಾಮ್ರಂಚದೃಶ್ಯತೆಪೂರ್ಣೆ॥ ೨೪॥

ಟೀ ॥ ಸಂಪೂರ್ಣಗ್ರಾಸ ಸೂರ್ಯಗ್ರಹಣದಲ್ಲಿ ವಿವರ್ಣವಾಗಿ ಅಲ್ಪವಾಗಿ ಪ್ರಕಾಶ ಉಂಟಾಗಿ ನಕ್ಷತ್ರಗಳು ಗ್ರಹಗಳು ಪರಿದೃಶ್ಯಮಾನಗಳಾಗುವವು, ಚಂದ್ರನಿಗೆ ಪಾದಗ್ರಾಸವಾದರೆ ಧೂಮ್ರವರ್ಣವು ಅರ್ಧಗ್ರಾಸವಾದರೆ ಕಪಿಲವರ್ಣವು ಪೂರ್ಣಗ್ರಾಸವಾದರೆ ಕೃಷ್ಣತಾಮ್ರವರ್ಣವು ಉಂಟಾಗುವದು.

ಅವ॥ ಕಂಕಣಗ್ರಹಣ ಜ್ಞಾನೋಪಾಯವು.

ವೃತಾ॥ ಛಾದ್ಯಾರ್ಕಬಿಂಬತೊಲ್ಪಂಛಾದಕಶಶಿಬಿಂಬಮಬ್ಜವಿಕ್ಷೇಪಃ।
ಶೂನ್ಯಂಚೇತ್ಕಂಕಣಮಿವಭಾಸೋರ್ಬಿಂಬಸ್ಯದೃಶ್ಯತಪದಿತಃ॥ ೩೫॥
ಇತಿ ಶ್ರೀಮಚ್ಛಂಕರ ಭಾರತೀಂದ್ರ ವಿರಚಿತೆ ಖಚರದರ್ಪಣೆ
ಚಂದ್ರಗ್ರಹಣಾಧ್ಯಾಯಃ ಪಂಚಮಿತಃ.



ಟೀ ॥ ಛಾದ್ಯ ಬಿಂಬವಾದರವಿ ಬಿಂಬಕ್ಕಿಂತಲು ಛಾದಕ ಚಂದ್ರಬಿಂಬವು ನ್ಯೂನವಾಗಿ ವಿಕ್ಷೇಪ ಶೂನ್ಯವಾದರೆ ಸೂರ್ಯಬಿಂಬದಸುತ್ತೂ ಕಂಕಣಾಕಾರವಾಗಿ ಕಾಣಲ್ಪಡುತ್ತೆ, ಈಕಂಕಣ ಗ್ರಹಣವು ಸೂರ್ಯಗ್ರಹಣದಲ್ಲೇ ಸಂಭವಿಸಿದಾಗ್ಯು ರವಿಗೆ ಚಂದ್ರವಿಕ್ಷೇಪಾಧೀನದಿಂದ ಇಲ್ಲಿ ಹೇಳಲ್ಪಟ್ಟಿತು.

ಉ ದಾ ಹ ರ ಣ.

ವ್ಯರ್ಕೇಂದು ೫-೨೫-೩೫-೧೯ ಗ ೬೬೦-೩೭ ಗಮ್ಯಪರ್ವ ೨೪-೧ ದಿನಾರ್ಧ ೧೫-೪೭ ಸೂರ್ಯೋದಯಾದಿ ಪರ್ವ ೩೯-೪೮ ಇದರಲ್ಲಿ ಅಹಃಪ್ರಮಾಣ ಕಳದ ಅಸ್ತಾದಿಪರ್ವ ೮-೧೪ ತತ್ಕಾಲ ರವಿ ೦-೧೯-೧೦-೨೦ ಚಂದ್ರ ೬-೧೯-೧೦-೨೦ ರಾಹು ೦-೧೩-೩೬-೧೦ ಇಲ್ಲಿ ಚಂದ್ರ ರಾಹ್ವಂತರ ಭಾಗವು ೧೨ ಕ್ಕಿಂತ ಕಮ್ಮಿ ಯಾದ್ದರಿಂದ ಗ್ರಹಣ ಸಂಭವಿಸುವದು ಪಾತೋನ ಚಂದ್ರ ೬-೫-೩೪-೧೦ ಭುಜಃ ೦-೫-೩೩-೫ ಜಾ ಭಾಗಾದಿ ೧-೪೭-೨೧ ಇದನ್ನು ೩೬ ರಿಂದ ಗುಣಿಶಿ ೬೦ ರಿಂದ ಲಬ್ಧ ೨೮-೧೬ ಪಾತೋನ ಚಂದ್ರ ತುಲಾದಿಯಾದ್ದರಿಂದ ಓಜಪದ ದಕ್ಷಿಣ ಶರವಾಯಿತು ಚಂದ್ರಸ್ಫುಟ ಗತಿ ೭೩೨-೦ ಇದನ್ನು ೬೦ ರಿಂದ ಗುಣಿಶಿ ೧೪೮೨ ರಿಂದ ಭಾಗಿಶಿ ಬಂದ ಚಂದ್ರಬಿಂಬವ್ಯಾಸಕಲೆ ೨೯-೩೮ ಪುನಃ ಚಂದ್ರಗ ತಿಯನ್ನು ೬೦೦ ರಿಂದ ಗುಣಿಶಿ ೪೪೪೭ ರಿಂದ ಭಾಗಿಶಿ ಬಲತಮೋ ಬಿಂಬ ೯೮-೪೬ ಇಲ್ಲಿ ರವಿಗತಿ ೫೮-೭ ಇದರಲ್ಲಿ ೧೪-೩೩ ಕಳದ ಶೇಷ ೪೩-೩೪ ಇದನ್ನು ೬೦೦ ರಿಂದ ಗುಣಿಶಿ ೧೧೦೮ ರಿಂದ ಭಾಗಿಶಿ ಬಂದಕಲಾದಿ ೨೩-೩೫ ಪೂರ್ವೋಕ್ತ ತಮೋಬಿಂಬಕಲೆ ೯೮-೪೬ ರಲ್ಲಿ ಕಳಿಯಲು ೭೫-೧೧ ಸ್ಫುಟತಮೊ ಬಿಂಬವಾ ಯಿತು. ಈಬಿಂಬದ್ವಯ ಯೋಗಾರ್ಧ ೫೨-೧೭ ಇದರಲ್ಲಿ, ವಿಕ್ಷೇಪ ೨೮-೧೬ ಕಳದ ಶೇಷ ೨೪-೯ ಇದೆ ಗ್ರಾಸಲಿಪ್ತಿಃ ಬಿಂಬಯೋಗಾರ್ಧ ವರ್ಗ ೨೭೪೭-೩೦ ವಿಕ್ಷೇಪವರ್ಗ ೭೯೯-೦ ಈಯೆರಡು ವರ್ಗಗಳ ಅಂತರ ೧೯೪೮-೩೦ ಇದಕ್ಕೆ ಮೂಲ ೪೪-೯ ಇದನ್ನು ೬೦ ರಿಂದ ಗುಣಿಶಿ ವ್ಯರ್ಕೇಂದು ಗತಿಯಿಂದ ಭಾಗಿಶಿಬಂದ ಸ್ಥಿತ್ಯರ್ಧ ಘುಳಿಗೆ ೩-೫೫ ಸ್ಥಿತ್ಯರ್ಧ ಕಳದ ಪರ್ವಾಂತವೆ ಗ್ರಹಣ ಸ್ಪರ್ಶಕಾಲ ೪-೨೧ ಪರ್ವಾಂತವೆ ಗ್ರಹಣ ಮಧ್ಯಕಾಲ ೮-೧೬ ಸ್ಥಿತ್ಯರ್ಧ ಕೂಡಿದ ಗ್ರಹಣ

ಮೋಕ್ಷಕಾಲ ೧೨-೧೧ ಸ್ಥಿತ್ಯರ್ಧ ದ್ವಿಗುಣಿಶಿದ ಗ್ರಹಣಾದ್ಯಂತ ಪುಣ್ಯಕಾಲ ೭-೫೦ ಆಗ್ನೆಯ ದಿಶಿಸ್ಪರ್ಶ ವಾಯುವ್ಯ ಮೋಕ್ಷ ಕೃಷ್ಣ ತಾಮ್ರವರ್ಣ, |||÷ ತ್ರಯೋದಶಾಂಶಾಧಿಕಗ್ರಾಸ.

### ಅನ್ಯ ಉದಾಹರಣೆ.

ಸರ್ವಜಿನ್ನಾಮಸಂವತ್ಸರ ಮಾಘ ಶುಕ್ಲ ೧೫ ಶನಿವಾರ ಸೂರ್ಯೋದಯಾದಿಘಟ್ಯ ೫೫-೬ ಅಹಃ ೨೮-೨೧ ಅಸ್ತಾದಿಘಟ್ಯ ೨೬-೪೫ ತತ್ಕಾಲ ಸರ್ವಫಲ ಸಂಸ್ಕೃತ ರವಿಃ ೯-೧೬-೨೩-೨೪ ಚಂದ್ರ ೩-೧೬-೨೩-೨೪ ರಾಹು ೩-೧೭-೩೯-೨೮ ಪಾತೋನಚಂದ್ರ ೧೧-೨೮-೪೩-೫೧ ಭುಜಜ್ಯೆ ೦-೧೦ ೪೬ ಯುಗ್ಮಪದ ದಕ್ಷಿಣ ವಿಕ್ಷೇಪ ೬-೨೭ ಚಂದ್ರಬಿಂಬ ೩೦-೫೬ ತಮೋಬಿಂಬ ೮೪-೫೩ ಬಿಂಬಯೋಗಾರ್ಧ ೫೭-೫೪ ಗ್ರಾಸ ೫೧-೨೭ ಬಿಂಬಯೋಗಾರ್ಧ ವರ್ಗ ೩೩೫೨-೨೪-೩೬ ವಿಕ್ಷೇಪವರ್ಗ ೪೧-೩೬-೯ ಅಂತರ ೩೩೧೦-೪೮-೨೭ ಇದಕ್ಕೆ ಮೂಲ ೫೭-೩೨ ಇದನ್ನು ೬೦ ರಿಂದ ಗುಣಿಶಿ ವ್ಯರ್ಕೇಂದು ಗತಿ ೭೪೪-೩೬ ರಿಂದ ಭಾಗಿಶಿಬಂದ ಸ್ಥಿತ್ಯರ್ಧ ೪-೩೮ ಚಂದ್ರ ತಮೋಬಿಂಬಾಂತರಾರ್ಧ ೨೬-೫೮ ಇದರ ವರ್ಗದಲ್ಲಿ ವಿಕ್ಷೇಪವರ್ಗ ಕಳದ ಶೇಷದ ಮೂಲ ೨೬-೩ ಇದನ್ನು ೬೦ ರಿಂದ ಗುಣಿಶಿ ವ್ಯರ್ಕೇಂದುಗತಿ ಭಾಗಿಶಿ ಬಂದ ವಿಮರ್ದಾರ್ಧ ೨-೬ ಅಸ್ತಾದಿಸ್ಪರ್ಶ ೨೨-೭ ನಿಮೀಲನ ೨೪-೩೯ ಮಧ್ಯಕಾಲ ೨೬-೪೫ ಉನ್ಮೀಲನ ೨೮-೫೧ ಬಿಂಬಾದರ್ಶನ ೪-೧೨ ಮೋಕ್ಷ ೩೧-೨೩ ರಾತ್ರಿ ಪ್ರಮಾಣ ೩೧-೪೮ ಇಲ್ಲಿ ಮತ್ತೊಂದುಪಾಯ ಬಿಂಬಯೋಗಾರ್ಧ ವಿಕ್ಷೇಪಯೋಗ ೬೪-೨೧ ಗ್ರಾಸದಿಂದ ಗುಣಿತ ೩೧-೩೦-೪೮ ಇದಕ್ಕೆ ಮೂಲ ೫೫-೫೭ ಇದರ ಸ್ಥಿತ್ಯರ್ಧ ೪-೩೦ ಹೀಗೆ ಸುಲಭೋಪಾಯಗಳು ಇವೆ, ದಶಾಂಶಾಧಿಕ ಸಂಪೂರ್ಣಗ್ರಾಸ (೧||=) ಕೃಷ್ಣತಾಮ್ರವರ್ಣ ಈಶಾನ್ಯ ಸ್ಪರ್ಶ ನೈರುತ್ಯ ನಿಮೀಲನ, ಆಗ್ನೇಯೋನ್ಮೀಲನ ವಾಯುವ್ಯ ಮೋಕ್ಷಂ.

ಇಂತು ಖಚರದರ್ಪಣಕ್ಕೆ ಭಾವಬೋಧಿನಿ ಎಂಬ ಕನ್ನಡ ಟೀಕಿನೊಳ್
ಚಂದ್ರಗ್ರಹಣಾಧ್ಯಾಯಂ ಮುಗಿದುದು.



ಶ್ರೀ

ಖಚರದರ್ಪಣೆ.

## ಸೂರ್ಯಗ್ರಹಣಾಧ್ಯಾಯಃ ಪ್ರಾರಂಭಃ.



ಅವ ॥ ಜ್ಞಾನಸ್ವರೂಪನಾದ ಭಗವಂತನನ್ನು ಸ್ತುತಿಸುತ್ತಾರೆ.

ಮೂ॥ ಹೃದಾಕಾಶಮಧ್ಯೇ ಚಿದಾದಿತ್ಯ ಬಿಂಬಂ ಸದಾ ಭಾತಿಯದ್ಭಾ ಸತಂಸ್ವಪ್ರಭಾಭಿಃ । ಸಮಸ್ತಸ್ಯ ಲೋಕಸ್ಯ ಸಾಕ್ಷಾದುಪಾಸ್ಯಂ ಪರಬ್ರಹ್ಮ ನಾನ್ಯಾನಿಯತ್ರಪ್ರಭಾಂತಿ॥ ೧॥

ಟೀ ॥ ಮನಸ್ಸೆಂಬ ಆಕಾಶ ಮಧ್ಯದಲ್ಲಿ ತನ್ನ ಕಾಂತಿಯಿಂದಲೇ ಪ್ರಕಾಶಮಾನವಾದಂಥಾ ಜ್ಞಾನವೆಂಬ ಸೂರ್ಯಬಿಂಬವು ಯಾವಾಗ್ಯೂ ಪ್ರಕಾಶಿಸುತ್ತಲಿರುವದೋ ಅದೇ ಸಕಲ ಲೋಕಕ್ಕು ಪ್ರಕಾಶಕರವಾದದ್ದಾಗಿರುವದು. ಯಾವ ಜ್ಞಾನಸೂರ್ಯಕಾಂತಿಗೆ ಯೆದುರಾಗಿ ಇತರವಾದಂಥಾ ಸೂರ್ಯ ಚಂದ್ರಾದಿಗಳ ತೇಜಸ್ಸುಗಳು ಪ್ರಕಾಶಿಸುವದಿಲ್ಲವೋ ಅಂಥಾ ಪರಬ್ರಹ್ಮ ಸ್ವರೂಪವನ್ನು ಭಾವಿಸುವೆವು.

ಅವ ॥ ನತಸಾಧನೋಪಾಯವು.

ಮೂ॥ ಪರ್ವಾಂತಾರ್ಕವಿಶೋಧಿತಲಗ್ನಸ್ಥಿತರಾಶಿಭಾಗಲಿಪ್ತಾದ್ಯಾಃ ।
ಪಂಚಹತಾಃಮಾನಹೃತಾಃದ್ವಿಘ್ನಾಂಶಾದ್ಯಾಯಥಾಮಾನಂ॥ ೨॥
ಲಂಬನದಿನಗತಘುಟಿಕಾಬಾಣವಿಧೌಶೋಧಿತಾಶ್ಚಪೂರ್ವನತಂ ।
ಬಾಣವಿಧುರೇವಶೋಧ್ಯೋಯದಿಲಂಬನದಿನಗತೇನತಂಪಶ್ಚಾತ್॥ ೩॥

ಟೀ॥ ಪರ್ವಾಂತಕಾಲಗ್ನದಲ್ಲಿ ದೃಕ್ಸಿದ್ಧಸ್ಫುಟ ಪರ್ವಾಂತರವಿಯನ್ನು ಕಳದು ನಿಂತರಾಶ್ಯಾದಿಯನ್ನು ೫ ರಿಂದ ಗುಣಿಶಿ ಸವರ್ಣ್ಣಿಸಿ ಭಾಗಾದಿಯನ್ನು ದ್ವಿಗುಣಿಶಿ ಯಥಾವಿಧಿ ಸವರ್ಣ್ಣಿಸಲು ರಾಶ್ಯಾದಿಯು ಲಂಬನ ದ್ಯುಗತ ವಾಗುವದು. ಈ ಲಂಬನ ದ್ಯುಗತ ಘುಟಿಕೆಯನ್ನು ೧೫ ಘುಳಿಗೆಗಳಲ್ಲಿ ಕಳಿಯಲ್ಪಟ್ಟರೆ ನಿಂತ ಶೇಷವೇ ಪೂರ್ವನತ ಘುಳಿಗೆ ಯಾಗುವದು ೧೫ ಘುಳಿಗೆಗಿಂತ ಹೆಚ್ಚಾದಾಗ ೧೫ ಘುಳಿಗೆಯನ್ನೆ ಕಳದು ನಿಂತ ಶೇಷವೇ ಪಶ್ಚಿಮನತ ಘುಳಿಗೆ ಯಾಗುವದು (ಉಪಕರಣಾಧ್ಯಾಯ ಶ್ಲೋಕ ೧೩.)

ಅವ ॥ ಗ್ರಹಣ ಮಧ್ಯಕಾಲ ಲಂಬನವು.

ಮೂ॥ ನತಘಟಿಕೋನಿತವಿಂಶತಿನಿಹತಂನತಮೇತದೇವಷಷ್ಟಿಘ್ನಂ ।
ಸ್ಯಾತ್ಸ್ವದೇಶವಿಷುವತ್ಕರ್ಣದ್ವಿಗುಣೇನಷಷ್ಟಿನಿಹತೇನ॥ ೪॥
ಭಾಜಿತಲಬ್ಧಂಲಂಬನಮಿಹಮಧ್ಯಗ್ರಹಣಕಾಲಜಂಶುದ್ಧಂ ।
ಸ್ಯಾತ್ಪ್ರಾಗ್ಗ್ರಹಣಾತ್ಪರ್ವಣಿಶೋಧ್ಯಂಪಶ್ಚಾತ್ಕಪಾಲತೋಯೋಜ್ಯಂ॥ ೫॥
ಏತಲ್ಲಂಬನಸಂಸ್ಕೃತದರ್ಶಾಂತೋಗ್ರಹಣಮಧ್ಯಕಾಲಸ್ಸ್ಯಾತ್ ।
ರವಿಚಂದ್ರರಾಹುಗತಯೋರ್ಲಂಬನನಿಘ್ನಾಃಷಷ್ಟಿಹೃತಾ॥ ೬॥
ಫಲಂಕಲಾದಿಭವೇತ್ಪೂರ್ವಾಹ್ಣೇರಹಿತಮಿತರಥಾಪರಾಹ್ಣೇ ।
ರವಿಶಶಿನೋರ್ಲಿಪ್ತಾದಿಷುಕುರ್ಯಾದ್ರಾಹೋಸ್ತುವೈಪರೀತ್ಯೇನ॥ ೭॥

ಟೀ॥ನತಘಳಿಗೆ ವಿಘಳಿಗೆಗಳನ್ನು ೨೦-ರಲ್ಲಿ ಕಳೆದು ಶೇಷದಿಂದ ನತಘಳಿಗೆಗಳನ್ನು ಗುಣಿಸಿ ಸ್ವದೇಶ ವಿಷುವತ್ಕರ್ಣವನ್ನು ದ್ವಿಗುಣಿಸಿ ಭಾಗಿಸಿಬಂದ ಫಲವೆ ಗ್ರಹಣ ಮಧ್ಯಕಾಲ ಲಂಬನ ವಾಗುವದು ಪೂರ್ವನತವಾದರೆ ಈಲಂಬನವನ್ನು ಪರ್ವಾಂತ ಘಳಿಗೆಗಳಲ್ಲಿ ಕಳೆಯುವದು ಪಶ್ಚಾನ್ನತವಾದರೆ ಪರ್ವಾಂತದಲ್ಲಿ ಕೂಡುವದು ಶುದ್ಧಸ್ಫುಟ ಪರ್ವಾಂತ ಗ್ರಹಣ ಮಧ್ಯಕಾಲ ವಾಗುವದು, ಲಂಬನ ಸಂಸ್ಕೃತ ಪರ್ವಾಂತಕಾಲಕ್ಕೆ ರವಿ ಚಂದ್ರ ರಾಹುಗಳನ್ನು ತತ್ಕಾಲ ಗ್ರಹ ಸಾಧಿಸಬೇಕು.

ಅವ ॥ ದ್ವಿತೀಯನತಸ್ಫುಟಶರಾರ್ಕ ಸಾಧನೋಪಾಯವು.

ಮೂ॥ ಅಥಲಂಬನಸಂಸ್ಕೃತಪರ್ವಾಹರ್ದಳನಾಡಿಕಾಂತರಂಹಿನತಂ ।
ಭವತಿದ್ವಿತೀಯಮೇತದ್ಬಾಣಹೃತಾ ದ್ರಾಶಿಭಾಗಲಿಪ್ತಾದ್ಯಂ॥ ೮॥
ಫಲಮೇತತ್ಪ್ರಾಗ್ಗ್ರಹಣೇಭಾನೌಶೋಧ್ಯಂತುಪಶ್ಚಿಮೇಕಪಾಲೇ ।
ಯೋಜ್ಯೈಭವೇದಯಂಸ್ಫುಟಶರಾರ್ಕಶ್ಚಲನಾಂಶಸಂಯುತಃಕಾರ್ಯಃ॥ ೯॥

ಟೀ ॥ ಲಂಬನ ಸಂಸ್ಕೃತ ಸ್ಫುಟ ಪರ್ವಾಂತಕ್ಕು ದಿನಾರ್ಧಕ್ಕು ಉಳ್ಳ ಅಂತರವೆ ಪ್ರಾಕ್ಪಶ್ಚಾನ್ನತವು, ಈನತವನ್ನು ೫ ರಿಂದ ಭಾಗಿಸಿ ಬಂದ ರಾಶ್ಯಾದಿಯನ್ನು ಪ್ರಾಙ್ನತವಾದರೆ ಪರ್ವಾಂತಸ್ಫುಟ ರವಿಯಲ್ಲಿ ಶೋಧಿಸುವದು ಪಶ್ಚಾನ್ನತವಾದರೆ ಕೂಡುವದು ಸ್ಫುಟಶರಾರ್ಕ ವಾಗುವದು. ಈ ಸ್ಫುಟಶರಾರ್ಕದಲ್ಲಿ ಅಯನಾಂಶ ಕೂಡಿ ಚರವಿಘಳಿಗೆ (ಮುಂದಸ್ಫುಟಾಧ್ಯಾಯ ಶ್ಲೋ ೨೦) ಉಕ್ತರೀತ್ಯಾ ಸಂಪಾದಿಸಬೇಕು.

ಅವ ॥ ನತಿಸಾಧನಾರ್ಥವಾಗಿಸ್ವ ನಿವಾಸಸ್ಥಾನದಿಂದ ಗ್ರಹಣ ದರ್ಶನ
ಸ್ಥಾನದಕ್ಷಿಣೋತ್ತರ ಯೋಜನ ಜ್ಞಾನೋಪಾಯವು.

ಮೂ॥ ಸಾಯನಖಾರ್ಕೋದ್ಭವಚರವಿಘಟೀಸ್ತ್ರಿಯಸ್ತ್ರಿಘ್ನಾನಿಹತ್ಯಾಸಾಃ ।
ಷಷ್ಟ್ಯಾವಿನಿಘ್ನಾಶ್ಚಿತ್ರಸ್ವಭಾಜ್ಞೇ ಯೋಜನಾನ್ಯಾಃ॥ ೧೦॥
ಖರಸಾಹತವಿಷುವದ್ಭಾಕ್ಷ್ಯಾ ಫಲಮುತ್ತರಸೌಮ್ಯಯಾಮ್ಯಸಿದ್ಧನತಂ ।

ಟೀ॥ ಸಾಯನಸೂರ್ಯನಿಂದ ಸಂಪಾದಿತವಾದ ಚರವಿಘಳಿಗೆಗಳನ್ನು ೬ರಿಂದ ಗುಣಿಸಿ ಸ್ವದೇಶ ವಿಷುವಛಾಯೆಯಿಂದ ಭಾಗಿಸಿ ಬಂದ ಯೋಜನಾತ್ಮಕ ಲಬ್ಧವನ್ನು ಸಾಯನಸೂರ್ಯ ಮೇಷಾದಿ ಯಾದರೆ ಉತ್ತರಯೋಜನವೆಂತಲು ತುಲಾದಿಯಾದರೆ ದಕ್ಷಿಣಯೋಜನವೆಂತಲು ತಿಳಿಯಬೇಕು.

ಅವ ॥ ಸ್ವನಿವಾಸಸ್ಥಾನದಿಂದ ದಕ್ಷಿಣ ವಿಷುವದ್ವೃತ್ತಾಂತರಾಳ ಯೋಜನ
ಜ್ಞಾನವು ನತಿಸಾಧನವು ಹೇಳಲ್ಪಡುತ್ತೆ.

ಮೂ॥ ಸ್ಥಾನಸ್ಯಸ್ವದೇಶವಿಷುವದ್ಭಾಯಾಸಂಶೋಧಿತಾದ್ವಿಪತ್ರಗುಣಿತಾ॥ ೧೧॥
ವಿಷುವತ್ಪ್ರಭಾಹಿದಕ್ಷಿಣಯೋಜನರೂಪಾಸ್ವದೇಶತೋಭವತಿ ।
ಉತ್ತರದಿಕ್ಸಂಭವಚರಫಲಮಸ್ಮಾಂಶೋಧ್ಯಮನ್ಯಥಾಯೋಜ್ಯಂ॥ ೧೨॥
ಕರಹತಯೋಜನತತ್ವವಿಭಕ್ತಾಲ್ಲಬ್ಧಂ ಭವೇದವನತಿಶ್ಚ ॥

ಟೀ॥ವಿಷುವಛಾಯೆಯನ್ನು ೬೦ರಲ್ಲಿ ಕಳಿದು ಶೇಷವನ್ನು ವಿಷುವಛ್ಛಾಯೆಯಿಂದ ಗುಣಿಸಿ ಗೋಮೂತ್ರ ಗಣಿತ ನ್ಯಾಯವಾಗಿ ಯಥಾಸ್ಥಾನ ಸವರ್ಣಿಸಲು ಸ್ವದೇಶ ನಿರಕ್ಷಾಂತರ ದಕ್ಷಿಣಯೋಜನಾತ್ಮಕ ವಾಗುವದು. ಪೂರ್ವ ಶ್ಲೋಕೋಕ್ತಯೋಜನವು ಉತ್ತರ ಚರಯೋಜನವಾದರೆ ದಕ್ಷಿಣಾಂತರಯೋಜನದಲ್ಲಿ ಕಳಿಯುವದು ದಕ್ಷಿಣ ಚರಯೋಜನವಾದರೆ ಕೂಡುವದು ಈ ಯೋಜನವನ್ನು ದ್ವಿಗುಣಿಸಿ ೨೫ರಿಂದ ಭಾಗಿಸಿ ಬಂದ ಲಬ್ಧವೆ ಅವನತಿ ಯಾಗುವದು, ದಕ್ಷಿಣ ಚರಯೋಜನವಾಗಿದ್ದರೆ ದಕ್ಷಿಣಾವನತಿಯೆಂತಲು ಉತ್ತರಚರವು ದಕ್ಷಿಣ ಚರಯೋಜನಕ್ಕಿಂತಲು ಅಧಿಕವಾದರೆ ಶೇಷದಿಂದ ಸಾಧಿತವೆ ಉತ್ತರಾವನತಿಯೆಂತಲು ಕಡಮೆಯಾಗಿದ್ದರೆ ದಕ್ಷಿಣ ಚರಯೋಜನದಲ್ಲಿ ಕಳಿದ ಶೇಷದಿಂದ ಸಾಧಿತವೆ ದಕ್ಷಿಣಾವನತಿಯೆಂತಲು ಅಭಿಪ್ರಾಯವು.

## ಅವ॥ ಎಷ್ಟ ಪಸಂಸ್ಕಾರವು.

ಮೂ॥ ಮಧ್ಯವಿಲಂಬನಕಾಲಸ್ಫುಟಪರ್ವಾದಾನೀಯೇಷ್ಟರಂತಮಸಃ॥ ೧೩॥
ಅವನತಿವಿಕ್ಷೇಪದಿಶೋರೈಕ್ಯೇಯೋಗೋನ್ಯಥಾ ಯೋಗಸ್ಯಾತ್ ।
ನತಿಶರಯೋರುಭಯೋರಪ್ಯಧಿಕತ್ವಾದನಧಿಕತಃಪ್ರಾಪ್ತಂ॥ ೧೪॥
ವಿರಳಂಸ್ಫುಟವಿಕ್ಷೇಪಸ್ಸ್ಯಾದಧಿಕಸ್ಯೈವದಿಗ್ಸ್ಫುತಶ್ಚ ತಯೋಃ॥

ಟೀ ॥ ಮಧ್ಯಲಂಬನ ಸಂಸ್ಕೃತ ಪರ್ವಾಂತಕಾಲಿಕ ಚಂದ್ರನಿಗೆ ಪೂರ್ವಾಧ್ಯಾಯೋಕ್ತರೀತ್ಯಾ ವಿಕ್ಷೇಪ ಸಾಧಿಸಿ ಅವನತಿಯನ್ನು ದಿಗೈಕ್ಯವಾದರೆ ಪರಸ್ಪರ ಕೂಡುವದು, ಭಿನ್ನದಿಕ್ಕಾದರೆ ಅಧಿಕವಾಗಿರುವದರಲ್ಲಿ ನ್ಯೂನವಾಗಿರುವದು ಕಳಿಯುವದು (ವಿಕ್ಷೇಪ ಸ್ಫುಟವಾಗುವದು) ಅಧಿಕವಾಗಿರುವದಕ್ಕೆ ವಿಕ್ಷೇಪದಿಕ್ಕು ಯೆಂಬದಾಗಿ ತಿಳಿಯಬೇಕು.

## ಅವ॥ ಸ್ಥಿತ್ಯರ್ಧಸಾಧನವು.

ಮೂ॥ ಅಥರ ಶಶಿನೋರ್ಬಿಂಬಾಭ್ಯಾಂಸಾಧ್ಯೌಸ್ಪರ್ಶಮೋಕ್ಷಕಾಲಭವೌ॥ ೧೫॥
ಸ್ಥಿತ್ಯರ್ಧೌದರ್ಶಾಂತವಿರಹಿತಸಹಿತೌಕ್ರಮಾತ್ತೌಕಾರ್ಯೌ ॥

ಟೀ॥ ಚಂದ್ರಗ್ರಹಣಾಧ್ಯಾಯೋಕ್ತರೀತ್ಯಾ ರವಿ ಚಂದ್ರಬಿಂಬಗಳಿಂದಲು ನತಿ ಸಂಸ್ಕೃತ ವಿಕ್ಷೇಪದಿಂದಲು ಸ್ಥಿತ್ಯರ್ಧ ಘಳಿಗೆಗಳನ್ನು ಸಾಧಿಸಬೇಕು ಪರ್ವಾಂತದಲ್ಲಿ ಕಳಿಯಲು ಸ್ಪರ್ಶಕಾಲವು ಕೂಡಲು ಮೋಕ್ಷಕಾಲವು ಆಗುವದು.

## ಅವ॥ ಸ್ಥಿತ್ಯರ್ಧ ಸ್ಥಿರೀಕರಣೋಪಾಯವು.

ಮೂ॥ ಸ್ಪರ್ಶಸ್ಥಿತಿವಿರಹಿತಪರ್ವಾಂತಸ್ಯಾರ್ಕಂತುಸಾಧಯಿತ್ವಾ॥ ೧೬॥
ಲಗ್ನಂತಸ್ಮಾತ್ಸ್ಪರ್ಶವಿಲಂಬನಮಪಿಪೂರ್ವಮುಕ್ತವದಿಹಸ್ಯಾತ್ ।
ಮೋಕ್ಷಸ್ಥಿತಿಯುತದರ್ಶಾಂತಸ್ಯಾಪ್ಯರ್ಕಂನತಂಚಲಗ್ನಂಚ॥ ೧೭॥
ಸಂಸಾಧ್ಯಮೋಕ್ಷಲಂಬನಮಾನೀಯಂ ಶಾಸ್ತ್ರವೇತ್ತಾವಿದುಷಾ ।
ಸ್ಪರ್ಶಾಖ್ಯಲಂಬನತೋಲ್ಪಂಮಧ್ಯಮಲಂಬನಂಸ್ಯಾಲ್ಲಂಬನಂಜ್ಞೇಯಂ॥ ೧೮॥
ತಸ್ಮಾನ್ಮೋಕ್ಷವಿಲಂಬನಮಲ್ಪಂಪ್ರಗ್ರಹಣಕಾಲತೋರ್ಕಸ್ಯ ।

ಪಶ್ಚಾತ್ಕಪಾಲಸೂರ್ಯಗ್ರಹಣೇಸ್ಪರ್ಶಾದ್ಧಲಂಬನಾದಧಿಕಂ॥ ೧೯॥
ಮಧ್ಯವಿಲಂಬನಮಸ್ಮಾದಧಿಕಂಮೋಕ್ಷಸ್ಯಲಂಬನಂಭವತಿ।

ಟೀ॥ ಪೂರ್ವೋಕ್ತರೀತ್ಯಾ ಸ್ಪರ್ಶ ಮೋಕ್ಷಕಾಲಕ್ಕೆ ಲಂಬನವನ್ನು ಸಾಧಿಸಬೇಕು. ಹೀಗೆ ಮೂರು ಲಂಬನವನ್ನು ಪುಂದಾವರ್ತಿಯೆ ಸಾಧಿಸಬೇಕು ಪ್ರತ್ಯೇಕವಾಗಿ ಸಾಧನ ಅವಶ್ಯಕವಿಲ್ಲ, ಪ್ರಾಜ್ನತವಾದರೆ ಸ್ಪರ್ಶ ಮಧ್ಯ ಮೋಕ್ಷ ಲಂಬನಗಳು ಉತ್ತರೋತ್ತರ ಕಡಿಮೆ ಯಾಗುವದು, ಪಶ್ಚಾನ್ನತವಾದರೆ ಅಧಿಕವಾಗುವದು.

ಅವ॥ ಪ್ರಾಜ್ನತ ಕಾಲದ ಸ್ಥಿತ್ಯರ್ಧ ನಿರ್ಣಯವು.

ಮೂ॥ ಸ್ಪರ್ಶಸ್ಯ ಮಧ್ಯಸ್ಯಚ ಲಂಬನಾಂತರಂ ಸ್ಪರ್ಶ ಸ್ಥಿತೌ ಪ್ರಾಗ್ಗ್ರಹಣೇತು
ಸಂಯುತಾತ್॥ ೨೦॥ ಸ್ಪಷ್ಟಾಸ್ಥಿತಿಸ್ಯಾ ದಥಮಧ್ಯ ಮೋಕ್ಷಯೋರೇವಂ
ಕೃತಾದಂತರತಃಸ್ಫುಟಾಭವೇತ್॥ ೨೦॥

ಟೀ॥ ಸ್ಪರ್ಶ ಮಧ್ಯ ಲಂಬನಾಂತರಗಳನ್ನು ಸ್ಪರ್ಶ ಸ್ಥಿತ್ಯರ್ಧದಲ್ಲಿ ಕೂಡುವದು, ಮಧ್ಯ ಮೋಕ್ಷ ಲಂಬನಾಂತರಗಳನ್ನು ಮೋಕ್ಷ ಸ್ಥಿತ್ಯರ್ಧದಲ್ಲಿ ಕೂಡುವದು, ಹೀಗೆ ಸ್ಪರ್ಶ ಮೋಕ್ಷ ಸ್ಥಿತ್ಯರ್ಧವು ಸ್ಫುಟವಾಗುವದು.

ಅವ॥ ಪಶ್ಚಾನ್ನತಕಾಲ ಸ್ಥಿತ್ಯರ್ಧ ನಿರ್ಣಯವು.

ಮೂ॥ ಸ್ಪರ್ಶಮಧ್ಯವಿಲಂಬನಾಂತರಮೇವಪಶ್ಚಿಮನತೇನತಾತ್ ॥
ಸ್ಥಿತಿದಳೆವಿಶೋಧಿತಂಸ್ಫುಟಾಭವೇತ್ಸ್ಥಿತಿಸ್ತಥಾ॥ ೨೧॥
ಮಧ್ಯಮೋಕ್ಷವಿಲಂಬನಾಂತರಮುಕ್ಷಲಮಾತ್ರವಿಶೋಧಿತಾ।
ತ್ಸ್ಫುಟತರಾಸ್ಥಿತಿರ್ವಿಮೋಕ್ಷಕಾಲಜೇತಿನಿಶ್ಚಿತಾ॥ ೨೨॥

ಟೀ ॥ ಸ್ಪರ್ಶ ಮಧ್ಯಕಾಲ ಲಂಬನಾಂತರಗಳನ್ನು ಸ್ಪರ್ಶ ಸ್ಥಿತ್ಯರ್ಧದಲ್ಲಿ ಕಳೆಯುವದು, ಮಧ್ಯ ಮೋಕ್ಷಕಾಲ ಲಂಬನಾಂತರಗಳನ್ನು ಮೋಕ್ಷಸ್ಥಿತ್ಯರ್ಧದಲ್ಲಿ ಕಳೆಯುವದು ಹೀಗೆ ಸ್ಪರ್ಶ ಮೋಕ್ಷ ಸ್ಥಿತ್ಯರ್ಧವು ಸ್ಫುಟವಾಗುವದು.

ಅವ॥ ಗ್ರಸ್ತೋದಯಗ್ರಸ್ತಾಸ್ತಸಮಯಗ್ರಹಣಗಳಸ್ಥಿತ್ಯರ್ಧನಿರ್ಣಯವು.

ಮೂ॥ ಗ್ರಸ್ತೋದಯಸ್ಯಗ್ರಹಣೇತುಪಶ್ಚಾತ್ಕಪಾಲತಸ್ಪರ್ಶನಿರ್ಣಕ್ಷಜಸ್ಥಿತಿ।
ಯಥಾಗತೇತ್ರಾಪಿತಥಾಭವೇತಾಂಗ್ರಸ್ತಾಸ್ತತ ಪೂರ್ವಕಪಾಲಪತ್ಸ್ಥಿತಿ॥ ೨೩॥

ಟೀ ॥ ಗ್ರಸ್ತೋದಯವಾದರೆ ಪಶ್ಚಾನ್ನತಕಾಲ ಗ್ರಹಣೋಕ್ತಸ್ಥಿತ್ಯರ್ಧ ಸ್ಫುಟೀಕರಣದಂತೆಯೆ ಸಾಧಿಸಬೇಕು, ಗ್ರಸ್ತಾಸ್ತವಾದರೆ ಪ್ರಾಙ್ನತ ಕಾಲಗ್ರಹಣೋಕ್ತರೀತ್ಯಾ ಸ್ಥಿತ್ಯರ್ಧ ಸ್ಫುಟೀಕರಣ ಸಾಧಿಸಬೇಕು.

ಅವ॥ ಪ್ರಾಙ್ನತ ಸ್ಪರ್ಶ ಪಶ್ಚಾನ್ನತಕಾಲ ಮೋಕ್ಷ ಸಂಭವವಾದಾಗ್ಗೆ ಸ್ಥಿತ್ಯರ್ಧ ನಿರ್ಣಯವು.

ಮೂ॥ ದಿನಾರ್ಧಪೂರ್ವೆಗ್ರಹಣಸ್ಯಸಂಭವೋದಿನಾರ್ಧಕಾಲಸ್ಯಪರೇವಿಮೋಚನಂ।
ಭವೇದ್ಯದೀಹಾಗತಲಂಬನದ್ವಯೋರ್ಸ್ತ್ವೈಕ್ಯೇನಸಂಯೋಗಕೃತೇಸ್ಫುಟಸ್ಥಿತಿ॥೭೪॥

ಟೀ ॥ ಮಧ್ಯಾಹ್ನಾತ್ಪೂರ್ವ ಸ್ಪರ್ಶವು ಮಧ್ಯಾಹ್ನಾತ್ಪರ ಮೋಕ್ಷವು ಸಂಭವಿಶಿದರೆ ಸ್ಪರ್ಶ ಮಧ್ಯ ಲಂಬನಗಳನ್ನು ಒಂದಾಗಿ ಕೂಡಿ ಸ್ಪರ್ಶ ಸ್ಥಿತ್ಯರ್ಧದಲ್ಲಿ ಕೂಡಲು ಸ್ಫುಟವಾಗುವದು, ಮಧ್ಯ ಲಂಬನವನ್ನು ಮೋಕ್ಷಲಂಬನಕ್ಕೆ ಕೂಡಿ ಮೋಕ್ಷ ಸ್ಥಿತ್ಯರ್ಧಕ್ಕೆ ಕೂಡಲು ಮೋಕ್ಷ ಸ್ಥಿತ್ಯರ್ಧ ಸ್ಫುಟವಾಗುವದು, ಏವಂಚ ಮಧ್ಯಲಂಬನ ಸಂಸ್ಕೃತ ಪರ್ವಾಂತವೆ ಮಧ್ಯಕಾಲವು, ಇದಕ್ಕೆ ಸ್ಫುಟ ಸ್ಪರ್ಶ ಸ್ಥಿತ್ಯರ್ಧ ಕಳೆಯಲು ಸ್ಪರ್ಶಕಾಲ ವಾಗುವದು, ಸ್ಫುಟಮೋಕ್ಷಸ್ಥಿತ್ಯರ್ಧ ಕೂಡಲು ಮೋಕ್ಷಕಾಲವಾಗುವದು, ಸ್ಪರ್ಶ ಮೋಕ್ಷ ಸ್ಥಿತ್ಯರ್ಧಗಳನ್ನು ಕೂಡಿಸಲು ಆದ್ಯಂತ ಪುಣ್ಯಕಾಲವಾಗುವದು.

ಅವ ॥ ಸಂಪೂರ್ಣ ಗ್ರಹಣವಾದಾಗ್ಗೆ ನಿಮೀಲನೋನ್ಮೀಲನ ಜ್ಞಾನಾರ್ಧವಾಗಿ ವಿಮರ್ದಾರ್ಧ ಸ್ಫುಟೀಕರಣೋಪಾಯವು.

ಮೂ॥ ಪ್ರಾಕ್ಪಶ್ಚಿಮೇಕಪಾಲೆದ್ವಿಕಪಾಲೆವಾಯಥಾಸ್ಫುಟಸ್ಥಿತ್ಯೋಃ।
ಲಂಬನಸಂಸ್ಕಾರೋಕ್ತಸ್ಸಕಲಗ್ರಾಸೇಪಿಮರ್ದ್ದಳಯೋಸ್ಸ್ಯಾತ್॥ ೭೫॥

ಟೀ ॥ ಈಸೂರ್ಯಗ್ರಹಣದಲ್ಲಿಯೂ ಚಂದ್ರಗ್ರಹಣೋಕ್ತಪ್ರಕಾರ ವಿಮರ್ದ್ಧಾರ್ಧವನ್ನು ಸಾಧಿಶಿ ಇದಕ್ಕೆ ಮೇಲೆ ಹೇಳದ ಪ್ರಾಙ್ನತ ಪಶ್ಚಾನ್ನತ ಪ್ರಾಕ್ಪಶ್ಚಾನ್ನತ ಗ್ರಹಣಗಳಿಗೆ ಹ್ಯಾಗೆ ಲಂಬನಾಂತರಗಳ. ಸ್ಥಿತ್ಯರ್ಧಕ್ಕೆ ಸಂಸ್ಕರಿಸಲ್ಪಟ್ಟಿತೂ ಅದರಂತೆಯೇ ಸಂಸ್ಕರಿಸಲು ವಿಮರ್ದಾರ್ಧ ಸ್ಫುಟವಾಗುವದು: ಈ ವಿಮರ್ದ್ದಾರ್ಧವನ್ನು ಮಧ್ಯಕಾಲದಲ್ಲಿ ಕಳೆಯಲು ನಿಮೀಲನ ಕಾಲವಾಗು

ವದು, ಕೂಡಲು ಉನ್ಮೀಲನ ಕಾಲವಾಗುವದು, ನಿಮೀಲನೋನ್ಮೀಲನಾಂತರವೆ ಬಿಂಬಾದರ್ಶನಕಾಲವು.

ಅ॥ ಸ್ಪರ್ಶ ಮೋಕ್ಷಾದಿ ದಿಗ್ವಿವೇಚನವು.

ವೃ॥ ಉತ್ತರವಿಕ್ಷೇಪೋಯದ್ಯುತ್ತರಗೋಳೆ ಮರುದ್ದಿಶಿ ಸ್ಪರ್ಶಃ ।
ಶಂಭುದಿಶಿಮುಕ್ತಿರಗ್ನೌ ನಿಮೀಲನಮುನ್ಮೀಲನಂ ತು ನೈಋತ್ಯಾಂ॥ ೭೬॥
ಯಾಮ್ಯಕ್ಷೇಪೇ ಯದಿ ನೈಋತ್ಯಾಂ ಸ್ಪರ್ಶೋಗ್ನಿದಿಶಿ ಮೋಕ್ಷಶ್ಚಾತ್ರ ।
ಐಶಾನ್ಯಾಂ ದಿಶಿ ನಿಮೀಲನಮುನ್ಮೀಲನಮರುದ್ದಿಶಿ ಜ್ಞೇಯಂ॥ ೭೭॥

---

ಇತಿ ಶ್ರೀಮಚ್ಛಂಕರ ಭಾರತೀಂದ್ರ ವಿರಚಿತೇ ಖಚರದರ್ಪಣೇ
ಸೂರ್ಯಗ್ರಹಣಾಧ್ಯಾಯಃ ಷಷ್ಠಮಃ

---

ಟೀ॥ ಉತ್ತರ ವಿಕ್ಷೇಪವಾದರೆ ಉತ್ತರಗೋಳದಲ್ಲಿ ವಾಯುವ್ಯ ದಿಕ್ಸ್ಪರ್ಶವು, ಈಶಾನ್ಯಮೋಕ್ಷವು, ಆಗ್ನೇಯ ನಿಮೀಲನವು. ನೈಋತ್ಯೋನ್ಮೀಲನವು ಸಂಭವಿಸುವದು, ದಕ್ಷಿಣ ವಿಕ್ಷೇಪವಾದರೆ ದಕ್ಷಿಣ ಗೋಳದಲ್ಲಿ ನೈಋತ್ಯ ಸ್ಪರ್ಶವು ಆಗ್ನೇಯ ಮೋಕ್ಷವು ಈಶಾನ್ಯ ನಿಮೀಲನವು ವಾಯುವ್ಯೋನ್ಮೀಲನವು ಸಂಭವಿಸುವದಾಗಿ, ತಿಳಿಯಬೇಕು.

---

ಇಂತು ಖಚರದರ್ಪಣದ ಭಾವಬೋಧಿನೀಯೆಂಬ ಕನ್ನಡ ಟೀಕಿನೊಳ್
ಸೂರ್ಯಗ್ರಹಣಾಧ್ಯಾಯವು ಮುಗಿದುದು.

---

ಉದಾಹರಣ.

—(*)—

ಭಾವನಾಮಸಂವತ್ಸರ ಭಾದ್ರಪದ ಬಹುಳ ಅಮಾವಾಸ್ಯೆ ಶನಿವಾರ ಸೂರ್ಯಗ್ರಹಣ ಸಾಧನವು, ಕಲಿಗತಾಬ್ದ ೪೯೭೫ ರವಿ ವರ್ಷಾಂತಧ್ರುವರಾಶ್ಯಾದಿ ೮-೧೪-೪೨ ಚಂದ್ರ ರಾಶ್ಯಾದಿ ೧೧-೦-೩೩-೦ ಚಂದ್ರೋಚ್ಚ ಧ್ರುವ ೫-೭೦-೪೪-೩೩ ರಾಹುಧ್ರುವಂ ೧೮-೩೭-೧೬ ಚೈತ್ರಾದಿ ಅಹರ್ಗಣ ೭೧೦ ಇದರಲ್ಲಿ ಗತರುತು ೩ರನ್ನು ಚಂದ್ರಧ್ರುವ ಭಾಗವನ್ನು ೧೨ ರಿಂದ ಭಾಗಿಸಿ ಬಂದದಿನ ೭೩ನ್ನು ಕಳದು ನಿಂತ ಅಹರ್ಗಣ ೧೪೦ ಇದರಿಂದ ಸಾಧಿತವಾದ ರವಿ ೫-೨-೭೮-

೩೦ ಚಂದ್ರ ೭-೧-೪೪-೩೬ ಚಂದ್ರೋಚ್ಚ ೦-೨೦-೨-೫೬ ರಾಹು ೬-೯-೩೨-
೧೪ ವರ್ಷಾಂತ ಧ್ರುವದಲ್ಲಿ ಕೂಡಿದ ರವಿ ೫-೨೭-೨೪-೩೦ ಚಂದ್ರ ೬-೨-೧೭-
೩೬ ಚಂದ್ರೋಚ್ಚ ೬-೧೦-೫೧-೩೩ ಕಳೆದ ರಾಹು ೦-೫-೦-೨ ಸಂಕ್ರಮಣ
ಘಟಿ ೧೮-೪೭ ಇಂಪ್ರ ಗ್ರಹಗತಿ ಗುಣಿಸಿ ೬೦ ರಿಂದ ಭಾಗಿಸಿ ಬಂದ ಫಲಶೋಧಿತ
ವಾದ ಅರ್ಧರಾತ್ರ ಕಾಲಗ್ರಹಗಳು ರವಿ ೫-೨೭-೬-೬ ಚಂದ್ರ ೫-೨೮-೧೬-೭
ರಾಹು ೦-೫-೧-೧ ಇದರಲ್ಲಿ ಅರ್ಧಗತಿ ಕಳೆದು ರಾಹುವಲ್ಲಿಕೂಡಲು ಅಮಾವಾಸ್ಯ
ಮಧ್ಯಾಹ್ನ ಕಾಲಗ್ರಹ ರವಿ ೫-೨೬-೩೬-೨೬ ಚಂದ್ರ ೫-೨೧-೩೪-೫೦ ಚಂ
ದ್ರೋಚ್ಚ ೬-೧೦-೪೬-೨೩ ರಾಹು ೦-೫-೨-೩೬ ದೃಕ್ಫಲ ಸಂಸ್ಕೃತ ರವಿ
೫-೨೬-೪೬-೨೩ ಚಂದ್ರೋಚ್ಚ ೬-೫-೧೫-೪೮ ಕುಂಡಿಸೀನಗರಕ್ಕೆ ದೇಶಾಂ
ತರ ಲಿಪ್ತಿ ರವಿಗೆ ೦-೨೯ ಚಂದ್ರನಿಗೆ ೬-೩೫ ರವಿಮಂದೋಚ್ಚ ೨-೧೮-೨೪-
೩೭ ಸ್ಫುಟರವಿ ೫-೨೪-೩೬-೨೫ ಗತಿ ೫೯-೧೪ ಋಣ ಭುಜಾಫಲ ೧-೨೯-೨೯
ದಿದಿನಾರ್ಧ ೧೪-೪೩ ರವಿಭುಜಾಫಲ ದೇಶಾಂತರಫಲ ಸಂಸ್ಕೃತ ಚಂದ್ರ ೫-
೨೧-೨೩-೨೮ ಸ್ಫುಟಚಂದ್ರ ೫-೨೨-೩೨-೪೪ ಗತಿ ೭೨೯-೩ ಹಾರಕ ೧೦೦-
೫೭ ರವಿ ಬಾಹುಫಲ ವಿಕಲಾದಿಯನ್ನು ೫೨೦ ರಿಂದ ಭಾಗಿಸಿದ ಲಬ್ಧ ಸಂಸ್ಕೃತ
ಸ್ಫುಟರವಿ ೫-೨೪-೫೧-೨೧ ಚತುಃ ಫಲ ಸಂಸ್ಕೃತ ಸ್ಫುಟಚಂದ್ರ ೫-೨೨-
೫೩-೨೮ ಪರದಿನ ಚತು ಫಲ ಸಂಸ್ಕೃತ ಚಂದ್ರ ೬-೪-೩೯-೫೫ ಇದರ ಅಂತ
ರವಿ ಗತಿ ೭೦೬-೧೭ ಅಯನಾಂಶ ೨೧-೨೦-೦ ಪ್ರಾಣಕಲಾಂತರ ೮೮-೫೫ ಪ್ರಾ
ಣಕಲಾಂತ ಸಂಸ್ಕೃತ ಸ್ಫುಟ ಚಂದ್ರ ೫-೨೨-೫೦-೪೪ ಗ ೭೦೬-೧೭ ರವಿ
೫-೨೪-೫೧-೭ ಗತಿ ೫೯-೧೪ ಸ್ಪರ್ಶೇಂದು ೧೧-೨೭-೫೯-೩೭ ಗತಿ ೬೪೭-೩
ಷಷ್ಠ್ಯಪರ್ವ ೧೧-೯ ಉದಯಾದಿಪರ್ವ ೨೫-೫೨ ತತ್ಕಾಲ ರವಿ ಚಂದ್ರರು ೫-೨೫-
೨-೨ ರಾಹು ೦-೫-೨-೧ ಸಾಯನರವಿ ೬-೧೬-೨೨-೨ ಭೋಗ್ಯ ಭಾಗಾದಿ ೧೩-
೩೭-೫೮ ಭೋಗ್ಯ ವಿಘಳಿಗೆ ೧೨೨-೨೨ ಇಷ್ಟಕಾಲ ವಿಘಳಿಗೆ ೧೫೫೨೦
ಸಾಯನಲಗ್ನ ೧೧-೨೩-೦-೪೦ ಅಯನಾಂಶ ರಹಿತ ಶುದ್ಧಲಗ್ನ ೧೧-೧-೪೦-೪೪
ಅರ್ಕೋನಲಗ್ನ ೫-೬-೪೯-೨೩ ಇದನ್ನು ೫ ರಿಂದ ಗುಣಿಸಿ ಪುನಃ ಭಾಗಾದಿಯ
ನ್ನು ದ್ವಿಗುಣಿಸಿ ಯಥಾನ್ಯಾಯವಾಗಿ ಸಾಧಿಸಿದ ಲಂಬನ ದ್ಯುಗತ ೨೬-೮ ರಲ್ಲಿ
೧೫ ಕಳೆದ ಶೇಷ ೧೧-೮ ಪಶ್ಚಾನ್ನತ ಇದನ್ನು ೨೦ ರಲ್ಲಿ ಕಳೆದ ಶೇಷ ೮-೫೨
ವನ್ನು ನತಘಳಿಗೆ ೧೧-೮ ರಿಂದ ಗುಣಿಸಿದ್ದು ೯೮-೪೨-೫೬ ಸ್ವದೇಶ ವಿಷುವ
ತ್ಕರ್ಣ ದ್ವಿಗುಣಿತ ೨೫-೩-೨೪ ರಿಂದ ಭಾಗಿಸಿಬಂದ ಮಧ್ಯಲಂಬನ ೩-೫೬ ಪಶ್ಚಾ
ನ್ನತವಾದ ಕಾರಣ ಪರ್ವಾಂತಕಾಲದಲ್ಲಿ ಲಂಬನವನ್ನು ಕೂಡಿದ ಶುದ್ಧಪರ್ವ ೨೯-
೪೮ ತತ್ಕಾಲರವಿ ೫-೨೫-೫-೪೯ ಚಂದ್ರ ೫-೨೫-೩೮-೪೦ ರಾಹು ೦-೫-೧-೪೯

ದಿನಾರ್ಧ ೧೪-೪೩ ಲಂಬನ ಸಂಸ್ಕೃತ ಪರ್ವಾಂತ ದಿನಾರ್ಧಾಂತರವೆ ಪಶ್ಚಾನ್ನತ ೧೪-೫೯ವನ್ನು ೫ ರಿಂದ ಭಾಗಿಸಿ ಬಂದ ಭಾರ್ಗವು ೨-೨೯-೫೪-೦ ಪಶ್ಚಿಮ ನತವಾದ್ದರಿಂದ ಶುದ್ಧ ಪರ್ವಾಂತ ರವಿಯಲ್ಲಿ ಕೂಡಲು ಸ್ಫುಟ ಭಾರ್ಗವು ೮-೨೪-೫೯-೪೯ ಅಯನಾಂಶ ಕೂಡಿದ ಸಾಯನ ಭಾರ್ಗವು ೯-೧೫-೧೯-೪೯ ಈ ಭಾರ್ಗದಿಂದ ಸಾಧಿತವಾದ ದಕ್ಷಿಣ ಚರವಿಘಟಿಕೆಗಳು ೧೪೧-೪೩ ಇದನ್ನು ೬ ರಿಂದ ಗುಣಿಸಿ ಸ್ವದೇಶ ವಿಷುವಛಾಯೆ ೩-೩೬ ರಿಂದ ಭಾಗಿಸಿದ ದಕ್ಷಿಣ ಚರಯೋಜನ ೨೩೬-೧ ವಿಷುವಛಾಯೆಯನ್ನು ೫೦ ರಲ್ಲಿ ಕಳೆದ ಶೇಷ ೪೬-೨೪ ದಿಂದ ವಿಷುವಛಾಯೆಯನ್ನು ಗುಣಿಸಲು ಸದಾ ದಕ್ಷಿಣಯೋಜನ ೧೬೭-೨-೨೪ ಸಾಯನ ಭಾರ್ಗ ಸಾಧಿತ ಚರಯೋ ನ ದಕ್ಷಿಣವಾದ್ದರಿಂದ ಪರಸ್ಪರ ಕೂಡಲು ೪೦೩-೩-೨೪ ಇದನ್ನು ದ್ವಿಗುಣಿಸಿ ೨೫ ರಿಂದ ಭಾಗಿಸಿ ಬಂದ ಫಲವೇ ದಕ್ಷಿಣಾ ವನತಿ ೩೨-೨೪ ಲಂಬನ ಸಂಸ್ಕೃತ ಪರ್ವಾಂತ ಚಂದ್ರ ೫-೨೫-೩೮-೪೦ ರಾಹು ೦-೫-೧-೪೯ ಪಾತೋನ ಚಂದ್ರಕೇಂದ್ರ ೫-೨೦-೩೬-೫೧ ಯುಗ್ಮಪದ ಉತ್ತರ ವಿಕ್ಷೇಪ ೪೭-೪೨ ಅವನತಿ ವಿಕ್ಷೇಪಗಳಿಗೆ ಭಿನ್ನದಿಕ್ಕಾದ ಪ್ರಯುಕ್ತ ಉಭಯಾಂತರವೆ ಶುದ್ಧ ಉತ್ತರ ವಿಕ್ಷೇಪ ೧೫-೧೮ ರವಿ ಬಿಂಬ ೩೨-೨೯ ಚಂದ್ರಬಿಂಬ ೨೯-೩೦ ಬಿಂಬೈಕ್ಯಾರ್ಧ ೩೧-೦ ಗ್ರಾಸಲಿಪ್ತಿ ೧೫-೪೨ ಬಿಂಬೈಕ್ಯಾರ್ಧವರ್ಗ ೯೬೧ ವಿಕ್ಷೇಪ ವರ್ಗ ೨೩೪-೫-೨೪ ಅಂತರ ೭೨೬-೫೪-೩೬ ಇದರಮೂಲ ೨೬-೫೮ ಇದನ್ನ ೬೦ ರಿಂದ ಗುಣಿಸಿ ಮಂದಸ್ಫುಟ ವ್ಯರ್ಕೇಂದು ಗತಿಯಿಂದ ಭಾಗಿಸಿ ಬಂದ ಸ್ಥಿತ್ಯರ್ಧ ಘಳಿಗೆಗಳು ೨-೧೪ ಇದನ್ನು ಉದಯಾದಿಪರ್ವ ೨೫-೫೨ ರಲ್ಲಿ ಕಳೆಯಲು ೨೩-೩೮ ತತ್ಕಾಲ ರವಿ ೫-೨೪-೫೯-೪೦ ತತ್ಕಾಲ ಲಗ್ನ ೧೦-೧೧-೧೫-೨೭ ಅರ್ಕೋನಲಗ್ನ ೪-೧೬-೧೫-೪೬ ಲಂಬನ ದ್ಯುಗತ ೨೨-೪೧ ಪಶ್ಚಾನ್ನತ ೭-೪೧ ಸ್ಪರ್ಶ ಲಂಬನ ೩-೪೬ ಸ್ಥಿತ್ಯರ್ಧ ಸಹಿತ ಪರ್ವ ೨೮-೧೬ ತತ್ಕಾಲ ರವಿ ೫-೨೫-೪-೨೪ ತತ್ಕಾಲ ಲಗ್ನ ೧೧-೧೭-೩-೪೯ ಅರ್ಕೋನ ಲಗ್ನ ೫-೨೧-೫೯-೨೫ ಲಂಬನ ದ್ಯುಗತ ೨೮-೪೦ ಪಶ್ಚಾನ್ನತ ೧೩-೨೦ ಮೋಕ್ಷಲಂಬನ ೩-೩೭ ಗ್ರಸ್ತಾಸಮಯ ಗ್ರಹಣವಾದ್ದರಿಂದ ಸ್ಪರ್ಶ ಮಧ್ಯ ಲಂಬನಾಂತರ ೦-೪ವನ್ನು ಸ್ಪರ್ಶ ಸ್ಥಿತ್ಯರ್ಧದಲ್ಲಿ ಕೂಡಿದ ಸ್ಪರ್ಶ ಸ್ಥಿತ್ಯರ್ಧ ೨-೨೮ ಮಧ್ಯ ಮೋಕ್ಷ ಲಂಬನಾಂತರ ಯುಕ್ತ ಮೋಕ್ಷ ಸ್ಥಿತ್ಯರ್ಧ ೨-೩೭ ಲಂಬನ ಸಂಸ್ಕೃತ ಶುದ್ಧ ಪರ್ವವೆ ಗ್ರಹಣ ಮಧ್ಯಕಾಲವು ೨೯-೪೨ ಸ್ಪರ್ಶ ಸ್ಥಿತ್ಯರ್ಧ ಕಳೆಯಲು ವಾಯುವ್ಯ ಸ್ಪರ್ಶಕಾಲ ೨೭-೧೪ ಮೋಕ್ಷಸ್ಥಿತ್ಯರ್ಧ ಯುಕ್ತ ಈಶಾನ್ಯ ಮೋಕ್ಷಕಾಲ ೩೨-೧೯ ಸ್ಪರ್ಶ ಮೋಕ್ಷ ಸ್ಥಿತ್ಯರ್ಧ ದ್ವಯ ಯೋಗವೆ ಆದ್ಯಂತ ಪುಣ್ಯಕಾಲ ೫-೫ ಅರ್ಧಗ್ರಾಸ ಧೂಮ್ರವರಃ.

## ಅನ್ಯಉದಾಹರಣೆ.

ಕಲಿಗತ ೪೯೩೯ ಬಹುಧಾನ್ಯನಾಮ ಸಂವತ್ಸರ ಪುಷ್ಯ ಬಹುಳ ಅಮಾವಾಸ್ಯಾ ಬುಧವಾರ ಸೂರ್ಯಗ್ರಹಣ ಸಾಧನಂ ಬೆಂಗಳೂರು ಸ್ವದೇಶ ನಿರ್ಲ್ವಿಜ ಮಧ್ಯಾಹ್ನ ಮಧ್ಯ ಗ್ರಹ ರವಿ ೯-೯-೪-೩೦ ಚಂದ್ರ ೯-೨-೩೨-೫೬ ಚಂದ್ರೋಚ್ಚ ೦-೫-೫-೫೬ ರಾಹು ೯-೧೧-೫೬-೫೮ ರವಿ ಮಂದೋಚ್ಚ ೨-೧೮-೨೪-೩೭ ಅಯನಾಂಶ ೨೧-೫೮-೦ ವಿಷುವಚ್ಛಾಯೆ ೨-೪೨ ಚರಖಂಡ ೭೭-೭೧-೯ ದೃಕ್ಸಿದ್ಧ ಗ್ರಹ ರವಿ ೯-೯-೧೪-೨೭ ಚಂ ೯-೨-೩೨-೫೬ ಚಂದ್ರೋಚ್ಚ ೧೧-೨೯-೩೪-೧೬ ರಾಹು ೯-೧೧-೫೬-೫೮ ಚಂದ್ರ ಮಂದಹಾರಕಂ ೯೬-೫೪ ಸ್ಫುಟ ಗ್ರಹ ರವಿ ೯-೧೦-೧-೭೧ ಗತಿ ೬೧-೧೦ ಧನ ೦-೦-೪೬-೫೪ ಹಾರಕ ೭೦೦-೧೧ ಚಂದ್ರ ೯-೭-೩೬-೧೫ ಗತಿ ೭೮೮-೫೦ ಪಷ್ಯ ಪರ್ವ ೧೧-೫೭ ಚಂದ್ರ ದ್ವಿತೀಯಫಲ ೫-೭೪ ಪಾತೋನ ಚಂದ್ರಫಲ ೧ ಚರಧನ ಫಲ ೧-೯ ಸ್ಪರ್ಶ್ಯೋದು ಖಣಫಲ ೭-೪೭ ಪಿಷ್ಯಪರ್ವ ೧೭-೧೭ ಪ್ರಾಣಕಲಾಂತರಫಲ ೫-೭ ಚತುರ್ಥ ಸ್ಫುಟಚಂದ್ರ ೯-೭-೩೫-೭೮ ಗ ೭೮೬-೭೧ ಸ್ಫುಟರವಿ ೯-೯-೫೫-೫೭ ಗ ೬೧-೧೦ ದಿನಾರ್ಧ ೧೪-೧೬ ಸ್ಪರ್ಶ್ಯೋದು ೧೧-೭೭-೪೦-೩೧ ಗ ೭೭೫-೩೧ ಪಿಷ್ಯಪರ್ವ ೧೧-೩೭ ಉದಯಾದಿಪರ್ವ ೨೫-೫೩ ತತ್ಕಾಲ ರವಿ ಚಂದ್ರರು ೧೦-೭-೪೪-೦ ಷಡ್ರಾಶ್ಯೂನ ಸಾಯನರವಿ ೪೭-೫-೫೪ ಭೋಗ್ಯ ಭಾಗಾದಿ ೭೭-೫೪-೬ ಗತ ಇಷ್ಟ ಘಟಿಗಳು ೧೫೯ ಗತವಿನಾಡಿಗಳು ೭೭೧೩ ಸಾಯನಲಗ್ನ ೩-೧೭-೪೪-೧೪ ಶುದ್ಧಲಗ್ನ ೭-೭೫-೪೬-೧೪ ಅರ್ಕೋನಲಗ್ನ ೫-೧೫-೩೮-೩೦ ಲಂಬನ ದ್ಯುಗತ ೭೭-೩೬ ಪಶ್ಚಾನ್ನತ ೧೭-೩೬ ಅಪರನತವಾದ್ದರಿಂದ ಧನ ಲಂಬನ ೩-೪೩ ಲಂಬನ ಸಂಸ್ಕೃತ ಪರ್ವ ೭೯-೩೬ ಪಶ್ಚಾನ್ನತ ೧೫-೭೦ ಖಾರ್ಕ ೩-೭-೦ ಸ್ಫುಟಖಾರ್ಕ ೦-೧೭-೧೧-೩೦ ಸಾಯನಖಾರ್ಕ ೧-೪-೯-೩೦ ಉತ್ತರಚರ ವಿಘಳಿಗೆಗಳು ೫೯-೩೬ ಇದನ್ನು ೬ ರಿಂದ ಗುಣಿಸಿ ವಿಷುವಚ್ಛಾಯೆಯಿಂದ ಭಾಗಿಸಿದ ಉತ್ತರ ಚರಯೋಜನ ೧೬೯-೧೭ ಸದಾ ದಕ್ಷಿಣಚರ ಯೋಜನ ೧೭೭ ಇನ್ನು ಕಳದು ನಿಂತ ಶೇಷವಾದ ಉತ್ತರ ಚರಯೋಜನ ೪೭-೪೩ ಉತ್ತರಾವನತಿ ೩-೭೫ ಶುದ್ಧ ಪರ್ವಾಂತಕಾಲ ಚಂದ್ರ ೯-೧೦-೫೭-೩೫ ರಾಹು ೯-೧೧-೫೬-೫೮ ದಕ್ಷಿಣ ವಿಕ್ಷೇಪ ೪-೫೫ ನತಿ ವಿಕ್ಷೇಪ ದಿಗ್ಭೇದ ವಾದ್ದರಿಂದ ಉಭಯಾಂತರ ದಕ್ಷಿಣ ವಿಕ್ಷೇಪ ೧-೩೦ ರವಿ ಬಿಂಬ ೩೩-೩೭ ಚಂದ್ರಬಿಂಬ ೩೧-೯ ಬಿಂಬೈಕ್ಯಾರ್ಧ ೩೭-೭೦ ಗ್ರಾಸ ೩೦-೫೦ ಬಿಂಬೈಕ್ಯಾರ್ಧವರ್ಗ ೧೦೪೫-೭೬-೪೦ ವಿಕ್ಷೇಪವರ್ಗ ೭-೧೫ ವಿಕ್ಷೇಪವರ್ಗ ಸಂಕಲಿತ ಬಿಂಬೈಕ್ಯಾರ್ಧವರ್ಗ ೧೦೪೩-೧೧ ೪೦ ಮೂಲ ೩೭-೭೮ ಸ್ಥಿತ್ಯರ್ಧ ೭-೪೦ ಸ್ಥಿತ್ಯರ್ಧರಹಿತಪರ್ವ ೭೩-೧೩ ತತ್ಕಾ

ಲರವಿ ೯-೧೦-೪-೨ ಸಾಯನರವಿ ೧೦-೭-೩೭ ಭೋಗ್ಯಭಾಗಾದಿ ೨೩-೪೬-೪೮ ಭೋಗ್ಯವಿನಾಡಿಗಳು ೭೫೯-೭೮ ಇಷ್ಟವಿನಾಡಿ ೧೫೯೩ ಸಾಯನಲಗ್ನ ೩-೩-೪೭-೭೮ ಅರ್ಕೋನಲಗ್ನ ೪-೧-೮೯-೭೭ ಲಂಬನ ದ್ಯುಗತ ೭೪-೧೧ ಪಶ್ಚಾನ್ನತ ೧೦-೧೧ ಸ್ಪರ್ಶಲಂಬನ ೮-೭ ಮೋಕ್ಷಕಾಲಪರ್ವ ೭೮-೩೩ ತತ್ಕಾಲ ರವಿ ೯-೧೦-೭೮ ಷಡ್ರಾಶ್ಯೂತ ಸಾಯನರವಿ ೮-೭-೮-೭೮ ಸಾಯನಲಗ್ನ ೮-೭-೮-೭೮ ಅರ್ಕೋನಲಗ್ನ ೬-೦-೦-೦ ಲಂಬನ ದ್ಯುಗತಿ ೩೦-೦ ಪಶ್ಚಾನ್ನತ ೧೪-೦ ಮೋಕ್ಷ ಲಂಬನ ೩-೮ ಸ್ಪರ್ಶ ಮಧ್ಯ ಲಂಬನಾಂತರ ೦-೭೧ ಮಧ್ಯ ಮೋಕ್ಷ ಲಂಬನಾಂತರ ೦-೩೮ ಲಂಬನ ಸಂಸ್ಕೃತ ಸ್ಪರ್ಶ ಸ್ಥಿತ್ಯರ್ಧ ೩-೧ ಪಕ್ರಾಗ್ರಶ ಮೋಕ್ಷ ಸ್ಥಿತ್ಯರ್ಧ ೩-೧೮ ಮಧ್ಯಕಾಲದಲ್ಲಿ ಸ್ಥಿತ್ಯರ್ಧ ರಹಿತ ನೈಋತ್ಯಸ್ಪರ್ಶಕಾಲಃ ೭೬-೩೪ ಸ್ಥಿತ್ಯರ್ಧಯುತ ಆಗ್ನೇಯ ಮೋಕ್ಷಕಾಲಃ ೩೭-೪೬ ಅಹಃಪ್ರಮಾಣ ೦-೭೮-೩೨ ಸ್ಪೃಷ್ಟಾತಾಮ್ರವರ್ಣಃ ಪಂಚದಶಾಂಶಗ್ರಾಸಃ.

---

ಶ್ರೀ

## ಮಹಾಪಾತಾಧ್ಯಾಯ ಪ್ರಾರಂಭಃ.



ಅವ ॥ ಅನಿತ್ಯಪಾದಂಥಾ ಪರಬ್ರಹ್ಮವನ್ನು ನಮಸ್ಕರಿಸುತ್ತಾರೆ.

ಶ್ಲೋ॥ ಅಸ್ತಿತಿಯತ್ಪ್ರತ್ರ್ಯಕ್ಸೊಮಹಾತ್ಮಾಃ ಪ್ರಾಜ್ಞಾಃ ಪ್ರಸಿದ್ಧಾ ಅಧುನಾತನಾಶ್ಚ ।
ಯಃ ಪ್ರಾಹುರೇತಜ್ಜನನಾದಿಹೇತುಂ ನಮೋಸ್ತು ತಸ್ಮೈ ಪರಮೇಶ್ವರಾಯ ॥ ೧॥

ಟೀ ॥ ಮಹಾತ್ಮರೆಂತು ಪ್ರಸಿದ್ಧರಾದಂಥಾ ಪುರಾತನರಾದಂಥಾ ಸನಕಸನಂದನಾದಿ ಮಹರ್ಷಿಗಳುನ್ನು ಆ ಧುನಿಕರಾದ ಆಸ್ತಿಕರು ಯಾವದನ್ನು ಈಪ್ರರೋಕ್ಷವರ್ತಿಯಾದ ಪ್ರಪಂಚದ ಉತ್ಪತ್ತಿಸ್ಥಿತಿಲಯಾದಿಗಳಿಗೆ ಕಾರಣವನ್ನಾಗಿಯೂ ಯಾವದನ್ನು ಶಾಶ್ವತವಾಗಿರುವದನ್ನಾಗಿಯೂ ಯಾವ ಪರಬ್ರಹ್ಮದಲ್ಲಿ ನಂಬಿಕೆಯುಳ್ಳದ್ದಾಗಿ ಹೇಳುವರೋ ಅಂಥಾ ವಿರಾಟ್ಪುರುಷನಾದಂಥಾ ಪರಮೇಶ್ವರನಿಗೋಸ್ಕರ ನಮಸ್ಕಾರವಾಗಲಿ.

ಅವ ॥ ಮಹಾಪಾತರೂಪವು ತತ್ಕಾಲಗುಣದೋಷವು ಹೇಳಲ್ಪಡುತ್ತೆ.

ಮೂ॥ ರವೀಂದ್ವೋರ್ಯದಾಕ್ರಾಂತಿಸಾಮ್ಯಂ ಗೃಗುದ್ಧೇ ಮುಹಃಪಕ್ಷಿಪಾತೋಮಹಾಪಾತಸಂಜ್ಞಃ । ರಸಸ್ತಂಭನಂ ಮಧ್ಯಕಾಲೇಯತೋಸ್ಮಾತ್ ವಿನಾಶಾಯ ತಚ್ಛಾಂತಿಕರ್ಮಾತ್ರ ಕಾರ್ಯಂ॥ ೨॥

ಟೀ॥ ಸಾಯನರವಿಕ್ರಾಂತಿಗು ಸಾಯನ ಚಂದ್ರಕ್ರಾಂತಿಗು ಯಾವಾಗ ಕಲಾ ಸಾಮ್ಯವಾಗುವದೋ ಅದೇ ಪಾತಮಧ್ಯಕಾಲವು; ರವಿ ಚಂದ್ರ ಕಿರಣೋನ್ಯೋನ್ಯಾಭಿ ಮುಖವಾಗಿ ಐಕ್ಯವಾಗಿ ಬಿಂಬಕೇಂದ್ರ ರೂಪ ದೃಗುತ್ಪನ್ನವಾದ ಪ್ರಕಾಶಾತಿಶಯ ಸಂಭವದಿಂದುಂಟಾದ ಅಗ್ನಿಯು ಪ್ರವಹ ಮಾರುತದಿಂದ ಪ್ರಜ್ವಲಿಸುವಂಥಾದ್ದಾಗಿ ಲೋಕವನ್ನು ನಾಶಪಡಿಸುವದಕ್ಕಾಗಿ ಉಂಟಾಗುವದೆಂತಲು ಅದರ ರೂಪವನ್ನು ತತ್ಕಾಲ ದೋಷವನ್ನು ಹೇಳಲ್ಪಟ್ಟಿತು; ಆಮಧ್ಯಕಾಲದಲ್ಲಿ ಕ್ಷೀರವೃಕ್ಷವಂ ಛೇದಿಸಿದರ ಪೂರ್ವೋಕ್ತರ ೩ ಕ್ಷಣ ಪರ್ಯಂತರವು ಕ್ಷೀರವು ಹೊರಡದೆ ರಸಸ್ತಂಭನವಾಗುವದು, ತತ್ಕಾಲದಲ್ಲಿ ಗರ್ಭಾದಾನಾದಿ ಶುಭಕರ್ಮಗಳಿಗೆ ದೋಷವಾದ್ದರಿಂದ ಸ್ನಾನ ದಾನ ಜಪಾದಿ ಪುಣ್ಯ ಕರ್ಮಗಳನ್ನು ತಚ್ಛಾಂತಿಕರವಾಗಿ ಮಾಡತಕ್ಕದ್ದು.

ಅವ॥ ಕ್ರಾಂತಿವಿಕ್ಷೇಪ ಸಾಧನಾರ್ಥವಾಗಿ ಧ್ರುವ ಖಂಡಗಳು ಹೇಳಲ್ಪಡುತ್ತೆ.

ಮೂ॥ ಖಂಡಾನಿಷಟ್ಕ್ರಮಾತ್ಸ್ಯುಃಕ್ರಾಂತೇಸ್ಸ್ವಪಯುತರೂಪಕಥಿತಾನಿ ।
ಪಂಚಶಶಾಂಬರವೈಕೋನತ್ರಿಂಶದ್ವಿಂಶತಿರ್ಭವೇದಧಜ॥ ೩॥
ರೂಪಾಬ್ಧಯಶ್ಚಲೀಮುಖನಿಗಮಾಶ್ಚಂದ್ರೇಂದ್ರಿಯಾಣಿಖಗುಣಾಶ್ಚ ।
ಸಪ್ತಶರಾಃಪಂಚೇಂದವಗಗನರಸಾಶ್ಚತ್ರಿರ್ಕೀರ್ತಿತಾನ್ಯೇವಂ॥ ೪॥
ವಿಕ್ಷೇಪಕ್ರಾಂತೇಃಖಂಡಾನಿಗುಣಾಶ್ಚಾಗ್ನಯಶ್ಚಷಟ್ಚಶ್ಚ ।
ಅಷ್ಟತ್ರಿಂಶದ್ವಶಶರವೇದಾಃರುದ್ರಾಶ್ಚರಾಬ್ಧಯೋಽತ್ಯಾಕರ್ಕಾಃ॥ ೫॥

ಟೀ॥———೫॥

ಸೂರ್ಯ ಚಂದ್ರಕ್ರಾಂತಿ ಖಂಡಗಳು.

| | | | | | |
|---|---|---|---|---|---|
| ೧ | ೧೫ | ೦ | ಅ | ೧೪ | ೨೦ |
| ೨ | [illegible] | ೨೦ | ಅ | ೧೨ | ೨೫ |
| ೩ | ೪೧ | ೪೫ | ಆ | ೯ | ೪೫ |
| ೪ | ೫೧ | ೩೦ | ಅ | ೫ | ೪೫ |
| ೫ | ೫೭ | ೧೫ | ಅ | ೨ | ೪೫ |
| ೬ | ೬೦ | ೦ | ಆ | ೦ | ೦ |

ವಿಕ್ಷೇಪ ಖಂಡಗಳು.

| | | | | | |
|---|---|---|---|---|---|
| ೧ | ೩ | ೩ | ಆ | ೩ | ೩ |
| ೨ | ೬ | ೬ | ಆ | ೨ | ೨೪ |
| ೩ | ೯ | ೩೦ | ಆ | ೨ | ೧೫ |
| ೪ | ೧೮ | ೪೫ | ಆ | ೧ | ೦ |
| ೫ | ೧೧ | ೪೫ | ಆ | ೦ | ೨೭ |
| ೬ | ೧೨ | ೧೨ | ಆ | ೧ | ೯ |

## ಅಥ ॥ ಕ್ರಾಂತಿವಿಕ್ಷೇಪಸಾಧನಮ್.

---

ಮೂ॥ ಸಾಯನರವಿಶಶಿವಿಸ್ವರ್ಭಾನೂನಾಂಭಾಗಸಂಚಯಸ್ತಿಥಿಭಿಃ ।
ಭಕ್ತಾತ್ತತ್ಫಲಂತುಯಾತಂಖಂಡಂಹ್ಯೇಷ್ಯಸ್ಯತಸ್ಯವಿವರಹತಂ॥ ೬॥
ಶೇಷಂತಿಥಿಸಂಭಕ್ತಾದ್ಯುಕ್ತಂಕ್ರಾಂತಿರ್ಭವೇದ್ಗತೇನಫಲಂ ।
ಸ್ಫುಟಗತಿರಂತರನಿಘ್ನಾನವಶತಹೃತ್ಕ್ರಾಂತಿಭುಕ್ತಿರರ್ಕಸ್ಯ॥ ೭॥
ಏಕಾಯನಗತವಿಧುವಿಕ್ಷೇಪಾಯದ್ಯುಭಯಃಖಂಡಯೋರ್ದ್ವಿವರೇ ।
ಕೃತಸಂಕಲನಹತಾಸ್ಫುಟಗತಿರರ್ಕಸ್ಯೈವಹೃದ್ಗತಿಃಕ್ರಾಂತೇಃ॥ ೮॥
ವ್ಯಗುಶಶಿಕಕುಭೈಕ್ಯೇವಿಕ್ಷೇಪಕ್ರಾಂತಿಯೋಗಸ್ಸ್ಯಾತ್ ।
ಭಿನ್ನದಿಶಿಸ್ಕೃತವಿಯೋಗಶ್ಶುದ್ಧೇಂದುಕ್ರಾಂತಿರೇವಸಂಭವತಿ॥ ೯॥

ಟೀ॥ ರವಿಚಂದ್ರ ರಾಹುಗಳಿಗೆ ಅಯನಾಂಶ ಕೂಡಿ ಸಾಯನರವಿ ಭುಜ ಭಾಗವನ್ನ ೧೫ರಿಂದ ಭಾಗಿಶಿಬಂದ ಲಬ್ಧಸಮಾನ ಸಂಖ್ಯಾ ಖಂಡವನ್ನಿಟ್ಟು ಶೇಷವನ್ನು ವಿಷ್ಯಖಂಡಾಂತರದಿಂದ ಚತುಷ್ಪದ ನ್ಯಾಯವಾಗಿ ಗುಣಿಶಿ ೧೫ ರಿಂದ ಭಾಗಿಶಿ ಬಂದ ಫಲವನ್ನ ಪೂರ್ವೋಕ್ತ ಖಂಡಕ್ಕೆ ಶೇರಿಸಲು ರವಿಕ್ರಾಂತಿ ಯಾಗುವದು, ಇದರಂತೆಯೆ ಚಂದ್ರನಿಗು ಕ್ರಾಂತಿ ಸಾಧಿಸುವದು. ಮೇಷಾದಿ ಉತ್ತರ ದಿಕ್ಕಂತಲು ತುಲಾದಿ ದಕ್ಷಿಣದಿಕ್ಕಂತಲು ಕರ್ಕ್ಯಾದಿ ದಕ್ಷಿಣಾಯನವೆಂತಲು ಮಕರಾದಿ ಉತ್ತರಾಯಣವೆಂತಲು ಕೇಂದ್ರವಶದಿಂದ ತಿಳಿಯುವದು, ಚಂದ್ರನಲ್ಲಿ ರಾಹುವನ್ನು ಕಳಿದು ವಿರಾಹು ಚಂದ್ರ ಕೇಂದ್ರದಿಂದ ಕ್ರಾಂತಿ ಸಾಧನದಂತೆಯೆ ವಿಕ್ಷೇಪವನ್ನು ಸಾಧಿಸಿ ಚಂದ್ರಕ್ರಾಂತಿ ವಿಕ್ಷೇಪಗಳು ಏಕದಿಕ್ಕಾದರೆ ಕೂಡುವದು ಭಿನ್ನದಿಕ್ಕಾದರೆ ಅಧಿಕವಾಗಿರುವದರಲ್ಲಿ ಕಡಿಮೆಯಾಗಿರುವದನ್ನು ಕಳಿಯುವದು, ಅಧಿಕ ದಿಕ್ಕೆ ಕ್ರಾಂತಿ ದಿಕ್ಕಾಗುವದು, ರವಿಸ್ಫುಟ ಗತಿಯನ್ನು ರವಿಕ್ರಾಂತಿ ಖಂಡಾಂತರ ದಿಂದ ಗುಣಿಶಿ ೯೦೦ ರಿಂದ ಭಾಗಿಶಿದ ಲಬ್ಧ ಶುದ್ಧ ರವಿಕ್ರಾಂತಿ ಯಾಗುವದು, ಚಂದ್ರಕ್ರಾಂತಿ ವಿಕ್ಷೇಪಗಳು ಅಯನೈಕ್ಯವಾದರೆ ಕ್ರಾಂತಿ ವಿಕ್ಷೇಪಗಳನ್ನು ಯೋಗಮಾಡಿ ಚಂದ್ರಸ್ಫುಟ ಗತಿಯನ್ನು ಗುಣಿಶಿ ೯೦೦ ರಿಂದ ಭಾಗಿಸಲು ಶುದ್ಧ ಚಂದ್ರ ಕ್ರಾಂತಿಯಾಗುವದು, ಅಯನಭೇದವಾದರೆ ಕ್ರಾಂತಿ ವಿಕ್ಷೇಪಾಂತರಗಳನ್ನು ಪರಸ್ಪರ ಕಳಿದು ನಿಂತ ಶೇಷದಿಂದ ಚಂದ್ರಸ್ಫುಟ ಗತಿಯಿಂ ಗುಣಿಶಿ ೯೦೦ ರಿಂದ ಭಾಗಿಶಿ ಬಂದ ಲಬ್ಧವೆ ಶುದ್ಧ ಚಂದ್ರ ಕ್ರಾಂತಿ ಗತಿ ಯಾಗುವದು.

## ಅವ॥ ಪಾತಗತ್ವೈಷ್ಯ ಜ್ಞಾನೋಪಾಯವು.

ಮೂ॥ ಯುಗ್ಮಪದಸ್ಥಚಂದ್ರಕ್ರಾಂತಿಸ್ಸ್ವಲ್ಪಾಧಿಕಾರವೇಃಕ್ರಾಂತೇಃ ।
ಯದಿಪಾತೋಯಾತ್ವೈಷ್ಯಸ್ಯಾದೋಜಪದೇಷ್ವಯೋತಪಾತಶ್ಚಿ॥ ೧೦॥

ಟೀ॥ ಮೂರಾರು ರಾಶಿ ಪರ್ಯಂತ ಓಜಪದವೆಂತಲು ನಂತರ ೬ ರಾಶಿ ಪರ್ಯಂತ ಯುಗ್ಮ ಪದವೆಂತಲು ೯ ರಾಶಿಪರ್ಯಂತ ಓಜಪದವೆಂತಲು ನಂತರ ೧೨ ರಾಶಿ ವರಿಗು ಯುಗ್ಮಪದವೆಂತಲು ತಿಳಿಯುವದು, ರವಿಕ್ರಾಂತಿಗಿಂತಲು ಯುಗ್ಮಪದಸ್ಥಿತ ಚಂದ್ರಕ್ರಾಂತಿ ಕಮ್ಮಿಯಾದರೆ ಪಾತಗತವಾಗುವದು, ಅಧಿಕವಾದರೆ ಗಮ್ಯವಾಗುವದು, ಓಜಪದಸ್ಥಿತ ಚಂದ್ರಕ್ರಾಂತಿಯು ರವಿಕ್ರಾಂತಿಗಿಂತಲು ಅಧಿಕವಾದರೆ ಪಾತಪತವಾಗುವದು ಕಡಿಮೆಯಾದರೆ ಗಮ್ಯವಾಗುವದು.

---

## ಅವ॥ ಪಾತಮಧ್ಯಕಾಲ ಜ್ಞಾನೋಪಾಯವು.

ಮೂ॥ ಕ್ರಾಂತ್ಯೋರಂತರಮಂಬರರಸನಿಹತಂಕ್ರಾಂತಿಗತ್ಯೋಸ್ತು ।
ಯೋಗವಿಯೋಗೋದ್ಧೃತಫಲಮಿಷ್ಟಾಸ್ಸ್ಯುರ್ನಾಡಿಕಾತಥೈಷ್ಯಗತಾಃ॥ ೧೧॥
ಗತಗಮ್ಯೈಷ್ಟಘಟೀಭಿರ್ಯಾವತ್ಕ್ರಾಂತ್ಯೋರ್ಭವೇತ್ಸಾಮ್ಯಂತು ।
ತಾವನ್ಮುಹುರುಮುಹುಸ್ತತ್ಕಾಲಸ್ಯೇಂದುರಾಹವಸ್ಸಾಧ್ಯಾಃ ೧೨॥

ಟೀ॥ ಏಕಾಯನವಾದರೆ ರವಿಚಂದ್ರಕ್ರಾಂತಿ ಗತಿಯನ್ನು ಯೋಗಮಾಡುವದು, ಭಿನ್ನಾಯನವಾದರೆ ಗತ್ಯಂತರಮಾಡಿ ರವಿಚಂದ್ರಕ್ರಾಂತ್ಯಂತರವನ್ನು ೬೦ ರಿಂದ ಗುಣಿಸಿ ಈಗ ಹೇಳಲ್ಪಟ್ಟ ಕ್ರಾಂತಿ ಗತಿ ಯೋಗ ವಿಯೋಗದಿಂದ ಭಾಗಿಸಿದ ಲಬ್ಧವು ಘಳಿಗೆ ವಿಘಳಿಗೆಗಳಾಗುವದು, ಪಾತಗತವಾದರೆ ಇಷ್ಟ ಘಳಿಗೆಗಳಲ್ಲಿ ಕಳಿಯುವದು ಗಮ್ಯಪಾತವಾದರೆ ಕೂಡುವದು ಹೀಗೆ ಸಂಸ್ಕರಿಸಿದ ಘಳಿಗೆ ವಿಘಳಿಗೆಗಳ ಇಷ್ಟಕಾಲವು ಬೇರೆ ಯೇರ್ಪಡುವದು ತತ್ಕಾಲಕ್ಕೆ ರವಿಚಂದ್ರ ರಾಹು ಚಾಲನವ ಡಿ ಕ್ರಾಂತಿ ವಿಕ್ಷೇಪವಂ ಸಾಧಿಸಿ ಯಾವಾಗ ಕ್ರಾಂತಿಕಲಾ ಸಾಮ್ಯವಾಗುವದೋ ಅಮವರಿಗು ಪುನಃ ಪುನಃ ಕ್ರಾಂತಿ ಸಾಧಿಸಬೇಕು. ಈಪ್ರಕಾರವಾಗಿ ಸಾಧಿಸಿ ಯಾವಾಗ ಕ್ರಾಂತಿಕಲಾ ಸಾಮ್ಯವಾಗುವದೋ ಅದೇಪಾತ ಮಧ್ಯ ಕಾಲವು.

ಅವ॥ ಪಾತಸ್ಥಿತ್ಯರ್ಧ ಸಾಧನಾರ್ಥವಾಗಿ ರವಿಚಂದ್ರ ಬಿಂಬಸಾಧನವು.

ಮೂ॥ ವೇದಾಬ್ಧಿವಿಹೃತಾರ್ಕಸ್ಫುಟಗತಿರಿಹಭವೇತಿಬಿಂಬಮಥಶಶಿನಃ ।
ಷಟ್ಕೃತಭಕ್ತಾದ್ಭುಕ್ತಿರ್ಬಿಂಬಸ್ಸ್ಯಾತ್ಸ್ವದೇತಿವಿಜ್ಞೇಯಂ॥ ೧೩॥

ಟೀ ॥ ರವಿಸ್ಫುಟ ಗತಿಯನ್ನು ೪೪ ರಿಂದ ಭಾಗಿಸಿದ ಲಬ್ಧವೆ ಕಲಾದಿ ರವಿ ಬಿಂಬ ವಾಗುವದು, ಚಂದ್ರಸ್ಫುಟ ಗತಿಯನ್ನು ೬೦ ರಿಂದ ಭಾಗಿಸಿದ ಲಬ್ಧವೆ ಕಲಾದಿ ಚಂದ್ರಬಿಂಬ ವಾಗುವದು.

ಅವ॥ ಸ್ಥಿತ್ಯರ್ಧ ಸಾಧನವು.

ಮೂ॥ ಬಿಂಬೈಕ್ಯಾರ್ಧಂಷಷ್ಟಿಕ್ಷುಣ್ಣಂಗತ್ಯೋಸ್ಸೂರ್ಯೇಂದುಕ್ರಾಂತ್ಯೋಃ ।
ಯೋಗಸುಯೋಗನಾಯನಭೇದಾದಾಪ್ತಂಸ್ಥಿತ್ಯರ್ಧಂಭವತಿ॥ ೧೪॥

ಟೀ ॥ ಬಿಂಬೈಕ್ಯಾರ್ಧವನ್ನು ೬೦ ರಿಂದ ಗುಣಿಸಿ ಅಯನೈಕ್ಯವಾದರೆ ರವಿ ಚಂದ್ರಕ್ರಾಂತಿ ಗತಿಯೋಗದಿಂದಲು ಅಯನ ಭೇದವಾದರೆ ಗತಿ ವಿಯೋಗಾಂತರ ದಿಂದಲು ಭಾಗಿಸಿ ಬಂದ ಲಬ್ಧವೆ ಸ್ಥಿತ್ಯರ್ಧ ಘುಳಿಗೆ ವಿಘುಳಿಗೆ ಯಾಗುವದು.

ಅವ॥ ಪಾತ ಪ್ರವೇಶ ನಿರ್ಗಮನ ಮಧ್ಯಕಾಲಜ್ಞಾನವು.

ಮೂ॥ ಪಿಷ್ಯಗತೈಷ್ಯಘುಟೀಭಿರ್ಯುತವಿಯುತಂದಿನದಳಂತುಪಾತಸ್ಯ ।
ಮಧ್ಯಮಕಾಲಸ್ಥಿತ್ಯಾರಹಿತಸ್ಪರ್ಶೋಯುತಸ್ತುಮುಕ್ತಿಸ್ಸ್ಯಾತ್॥ ೧೫॥



ಇತಿ ಶ್ರೀಶುಭಂಕರ ಭಾರತೀಂದ್ರ ವಿರಚಿತೇ ಖಚರದರ್ಪಣೆ
ಮಹಾಪಾತಾಧ್ಯಾಯಸ್ಸಪ್ತಮಃ.

---

ಟೀ॥ ಪೂರ್ವೋಕ್ತ ಇಷ್ಟಕಾಲವನ್ನು ದಿನಾರ್ಧದಲ್ಲಿ ಗತವಾದರೆ ಕಳಿಯು ವದು ಗೈಷ್ಯವಾದರೆ ಕೂಡುವದು ಇದೆ ಪಾತ ಮಧ್ಯಕಾಲವು ಇದರಲ್ಲಿ ಸ್ಥಿತ್ಯರ್ಧ ಘುಳಿಗೆಗಳನ್ನು ಕಳಿಯಲು ಪಾತಸ್ಪರ್ಶಕಾಲವು ಕೂಡಲು ಪಾತಮೋಕ್ಷಕಾಲವು ಆಗುವದು, ಗಂಡಾದಿಯೋಗಾಷ್ಟಕದಲ್ಲಿ ವ್ಯತಿಪಾತವು ಶುಕ್ಲಾದಿಯೋಗ ಷಟ್ಕದಲ್ಲಿ ವೈಧೃತಿ ಮಹಾ ಪಾತಕವು ವಿಷುವದಯನವಾದ ಮೇಷ ತುಲಾಯನ

ಸನಿರಾಪದಲ್ಲಿ ಯೆರಡು ಪಾತ ಉಂಟಾಗುವದು ವಿಕ್ಷೇಪದಲ್ಲಿ ಕ್ರಾಂತಿ ಕಳಯೆಲ್ಲ ಟ್ಟರೆ ಪಪಾಸ್ಯತ್ಸ (ಪೂರ್ವೋಕ್ತರೀತ್ಯಾ ವಿಲೋಮವಾಗಿ) (ಅಪಸವ್ಯವಾಗಿ) ಸಂಭವಿಸುವದು, ಉತ್ತರಾಯಣ ದಕ್ಷಿಣಾಯನಗಳಾದ ಕರ್ಕಾಯನ ಮಕರಾಯನಗಳ ಪೂರ್ವೋಕ್ತರಗಳಲ್ಲು ಪಾತ ಅಭಾವ ವಾಗುವದು.



ಇಂತು ಖಚರದರ್ಪಣದ ಭಾಷಾಬೋಧಿನೀ ಎಂಬ ಕನ್ನಡ ಟೀಕಿನೊಳ್
ಮಹಾಪಾತಾಧ್ಯಾಯ ಮುಗಿದುದು.

---

## ಉದಾಹರಣ.

ಭಾವಸಂವತ್ಸರ ಆಶ್ವಯುಜ ಶುಕ್ಲ ಏಕಾದಶೀ ಬುಧವಾರ ಅರ್ಧರಾತ್ರಿ ಕಾಲಿಕ ಮಧ್ಯ ಗ್ರಹ ರವಿ ೬-೭-೨೬-೫೮ ಚಂದ್ರ ೧೦-೨೩-೬-೩೦ ಉಚ್ಚ ೬-೧೭-೭-೧೯ ರಾ ೦-೪-೨೬-೦ ಅಯನಾಂಶ ೭೧-೭೨-೦ ರವಿಮಂದೋಚ್ಚ ೭-೮-೨೪-೩೭ ಸ್ಫುಟ ರವಿ ೬-೫-೫೭-೩೭ ಗತಿ ೫೯-೪೭ ಋಣ ಭುಜಾಫಲ ೧೨೩-೫೪ ದಿನಾರ್ಧ ೧೪-೩೧ ಸ್ಫುಟ ಚಂದ್ರ ೧೦-೧೯-೧೫-೩೦ ಗತಿ ೮೩೬-೩೯ ಸಾಯನ ರವಿ ೬-೨೩-೧೭-೩೬ ಭುಜ ೦-೨೩-೧೭-೩೬ ಭಾಗಾದಿಯನ್ನು ೧೫ ರಿಂದ ಭಾಗಿಶಿದ ಲಬ್ಧ ೧ ಶೇಷ ಭಾಗಾದಿ ೧೭-೧೭-೩೬ ಖಂಡಾಂತರ ೧೪-೨೦ ರಿಂದ ಗುಣಿಶಿ ಯಥಾನ್ಯಾಯವಾಗಿ ೧೫ ರಿಂದ ಭಾಗಿಶಿ ಬಂದ ಲಭ್ಧ ೧೧-೧೩ ಗತಖಂಡ ೧೫ ರಲ್ಲಿ ಕೂಡಿದ ರವಿಕ್ರಾಂತಿ ೨೬-೩೩ ಸಾಯನಚಂದ್ರ ೧೧-೧೦-೨೫-೩೦ ಭುಜ ೦-೧೯-೨೫-೧೮ ಭಾಗಾದಿ ಸಾಧಿಸಲ್ಪಟ್ಟ ಚಂದ್ರಕ್ರಾಂತಿ ೧೯-೩೩ ಸಾಯನರಾಹು ೧-೨೫-೪೬-೦ ರಾಹೂನಚಂದ್ರ ೧೦-೧೪-೧೯-೩೦ ಭುಜಭಾಗಾದಿಸಾಧಿತ ವಿಕ್ಷೇಪ ೮-೩೧ ಚಂದ್ರಕ್ರಾಂತಿಯು ವಿಕ್ಷೇಪವು ಏಕದಿಕ್ಕಾದ್ದರಿಂದ ವಂದಕ್ಕೊಂದು ಸಂಯೋಗಮಾಡಲು ವಿಕ್ಷೇಪ ಶುದ್ಧ ಚಂದ್ರಕ್ರಾಂತಿ ೨೭-೪೪ ರವಿಕ್ರಾಂತಿ ೨೬-೩೩ ಉಭಯಾಂತರ ೧-೧೧ ರವಿಸ್ಫುಟ ಗತಿ ೫೯-೪೭ ರವಿಕ್ರಾಂತಿ ಖಂಡಾಂತರ ೧೪-೨೦ ರಿಂದ ಗುಣಿಶಿ ೯೦೦ ರಿಂದ ಭಾಗಿಶಿದ ರವಿಕ್ರಾಂತಿ ಗತಿ ೦-೫೭ ಚಂದ್ರಕ್ರಾಂತಿ ಖಂಡಾಂತರ ೧೪-೨೦ ವಿಕ್ಷೇಪ ಖಂಡಾಂತರ ೭-೭೪ ಕ್ರಾಂತಿ ವಿಕ್ಷೇಪಗಳು ಏಕಾಯನವಾದ್ದರಿಂದ ಪರಸ್ಪರ ಕೂಡಲು ೧೬-೪೪ ರಿಂದ ಚಂದ್ರಸ್ಪುಟ ಗತಿ ೮೩೬-೩೯ನ್ನು ಗುಣಿಶಿ ೯೦೦ ರಿಂದ ಭಾಗಿಶಿ ಬಂದ ಚಂದ್ರಕ್ರಾಂತಿ ಗತಿ ೧೫-೩೩ ರವಿ ಚಂದ್ರರಿಗೆ ಅಯನ ಭೇದವಾದ ಕಾರಣ ರವಿ ಚಂದ್ರಕ್ರಾಂತಿ ಗತ್ಯಂತರದಿಂದ ಕ್ರಾಂತ್ಯಂತರವಾದ ೧-೧೧ನ್ನು ಭಾಗಿಶಿದ ಲಬ್ಧ ಘಳಿಗೆ ವಿಘಳಿಗೆಗಳು ೩-೫೧ ಸಾಯನ ಚಂದ್ರನು ಯುಗ್ಮಪದ

ನಾದ್ದರಿಂದ ಪಾತವು ಗಮ್ಯ ೪–೫೧ರಿಂದ ರವಿಚಂದ್ರ ರಾಹುಗತಿಗಳನ್ನು ಗುಣಿಶಿ ತತ್ಕಾಲ ಸಂಸ್ಕರಿಶಿದ ಸಾಯನರವಿ ೬-೨೩-೧೩-೨೬ ಚಂದ್ರ ೧೧-೧೧-೩೩-೯ ರಾಹು ೦-೨೫-೪೫-೪೫ ರಾಹೂನಚಂದ್ರ ೧೦-೧೫-೪೩-೨೪ ರವಿಕ್ರಾಂತಿ ೨೬-೪೪ ರವಿಕ್ರಾಂತಿ ೨೬-೪೪ ಚಂದ್ರಕ್ರಾಂತಿ ೧೮-೧೩ ದಕ್ಷಿಣ ವಿಕ್ಷೇಪ ೮-೨೨ ಕ್ಷೇಪ ಸಂಸ್ಕೃತ ಶುದ್ಧ ಚಂದ್ರಕ್ರಾಂತಿ ೨೬-೨೯ ರವಿ ಚಂದ್ರಕ್ರಾಂತ್ಯಂತರ ೦-೫ ಇವನ್ನು ೬೦ ರಿಂದ ಗುಣಿಶಿ ಪೂರ್ವೋದಿತಕ್ರಾಂತಿ ಗತ್ಯಂತರದಿಂದ ಭಾಗಿಶಿದ ಲಬ್ಧ ಘಳಿಗೆಗಳು ೦-೨೦ ಸೂರ್ಯಕ್ರಾಂತಿಗಿಂತಲು ಯುಗ್ಮಪದ ಚಂದ್ರಕ್ರಾಂತಿ ಅಧಿಕವಾದ್ದರಿಂದ ಇಷ್ಟಕಾಲದಲ್ಲಿ ೦-೨೦ನ್ನ ಕಳಯಲು ಸ್ಥಿರೀಕೃತ ಗಮ್ಯ ಘಳಿಗೆ ೭-೨೯ ಇದನ್ನ ಅರ್ಧರಾತ್ರಿ ಪ್ರಮಾಣವಾದ ೪೭-೩೧ ರಲ್ಲಿ ಕೂಡಲು ಉದಯಾದಿ ಪಾತ ಮಧ್ಯಕಾಲ ೪೯-೦ ರವಿಸ್ಪಷ್ಟ ಗತಿ ೫೯-೪೪ನ್ನು ೪೪ ರಿಂದ ಭಾಗಿಶಿದ ಕಲಾದಿ ರವಿಬಿಂಬ ೧-೨೧ ಚಂದ್ರಗತಿ ೮೩೬-೩೯ನ್ನು ೬೦೦ ರಿಂದ ಭಾಗಿಶಿದ ಕಲಾದಿ ಚಂದ್ರಬಿಂಬ ೧-೨೩ ಬಿಂಬೈಕ್ಯಾರ್ಧ ೧-೨೦ ಇದನ್ನು ೬೦ ರಿಂದ ಗುಣಿಶಿ ರವಿ ಚಂದ್ರಕ್ರಾಂತಿ ಗತ್ಯಂತರದಿಂದ ಭಾಗಿಶಿ ಬಂದ ಸ್ಥಿತ್ಯರ್ಧ ಘಳಿಗೆಗಳು ೫-೩೭ ಪಾತ ಮಧ್ಯಕಾಲ ೪೯-೦ ಸ್ಥಿತ್ಯರ್ಧ ಕಳಯಲು ಪಾತ ಸ್ಪರ್ಶಕಾಲ ೪೩-೨೩ ಕೂಡಲು ಪಾತ ನಿರ್ಗಮನಕಾಲ ೫೪-೩೭.

ಶ್ರೀಕೃಷ್ಣಾರ್ಪಣಮಸ್ತು.

---

ಈಪ್ರಕಾರವಾಗಿ ಕೊಳ್ಳೇಗಾಲನಿವಾಸಿ ಜಟಾವಲ್ಲಭ ರಾಮಾನುಜಾ
ಚಾರ್ಯರವರ ತನೂಭವ ಕೃಷ್ಣ ದೈವಜ್ಞ ವಿರಚಿತ
ಮಾದ ಖಚರದರ್ಪಣದ ಭಾವಬೋಧಿನೀ
ಯೆಂಬ ಕರ್ನಾಟಕಭಾಷಾ ಟೀಕೆಯು
ಸಂಪೂರ್ಣವಾದುದು.
ಶ್ರೀಲಕ್ಷ್ಮೀನೃಸಿಂಹ ಪರಬ್ರಹ್ಮಣೇನಮಃ.

